# ಸೋಕ್ರಟೀಸ್



ಕರ್ನಾಟಕ ಸಾಹಿತ್ಯ ಪ್ರಕಟನ ಮಂದಿರ

ಬೆಂಗಳೂರು ನಗರ

೧೯೩೧

# ಸೋಕ್ರಟೀಸ್

ಶ್ರೀ ಸಿ. ರಾಜಗೋಪಾಲಾಚಾರ್

ಕರ್ಣಾಟಕ

ಸಾಹಿತ್ಯ ಪ್ರಕಟನ ಮಂದಿರ

ಬೆಂಗಳೂರು

# ಮುನ್ನುಡಿ

"ವಿಚಾರವಿಲ್ಲದ ಬಾಳು ಬಾಳಲ್ಲ; ತಿಳಿವಳಿಕೆಯಿಂದ ನಡೆಯದ ನಡತೆ ನಡತೆಯಲ್ಲ; ಜ್ಞಾನವೇ ಶೀಲ"—ಎಂದು ಸಾಕ್ರಟೀಸ್ ಒತ್ತಿ ಒತ್ತಿ ಹೇಳುತ್ತಿದ್ದನು. ಸತ್ಯ ಯಾವುದು, ಧರ್ಮ ಯಾವುದು ಎಂಬ ನಿಷ್ಪಕ್ಷಪಾತವಾದ ವಿಚಾರ; ಅಂತಹ ವಿಚಾರದಿಂದ ಒಂದು ನಿರ್ಣಯಕ್ಕೆ ಬಂದ ಜ್ಞಾನ; ಆ ಜ್ಞಾನದಿಂದ ಪರಿಷ್ಕೃತವಾದ ಆತ್ಮ; ಎಲ್ಲಾ ನಡೆ, ನುಡಿ, ಬಗೆ, ಗುರಿಗಳಲ್ಲಿ ಅಂತಹ ಆತ್ಮವೇ ಕಾಣಿಸಿಕೊಳ್ಳುತ್ತಿರುವ ಜೀವನ; ರಾಗದ್ವೇಷಗಳನ್ನು ಬಿಟ್ಟು, ಕಷ್ಟಸುಖಗಳಲ್ಲಿ ಸಮಚಿತ್ತವನ್ನಿಟ್ಟು, ಸೆರೆಮನೆಗೂ ಕಡೆಗೆ ಸಾವಿಗೂ ಹೆದರದೆ, ಕರ್ತವ್ಯವನ್ನು ನೆರವೇರಿಸುವ ಸತ್ಯಸಂಕಲ್ಪ; ಅಹಿಂಸೆ; ದಯೆ;—ಇದು ಆ ಮಹಾತ್ಮನ ಜೀವನ ಚರಿತ್ರೆಯ ಸಾರ. ಪ್ರಪಂಚದ ಎಲ್ಲಾ ಮಹಾತ್ಮರ ಜೀವನದ ತಿರುಳೂ ಇದೇ. ದೇಶಕಾಲಾನುಗುಣ್ಯವಾಗಿ ವೇಷ ಭಾಷೆಗಳಲ್ಲಿ, ಆಚಾರವ್ಯವಹಾರಗಳಲ್ಲಿ ಭೇದ ಕಾಣಬಹುದು. ಆತ್ಮಗುಣಗಳಲ್ಲಿ ಭೇದವಿಲ್ಲ. ಧರ್ಮಶಾಸ್ತ್ರಗಳಲ್ಲಿ, ಪುರಾಣಗಳಲ್ಲಿ, ಉತ್ತಮ ಸಾಹಿತ್ಯಗಳಲ್ಲಿ ಇದನ್ನು ಓದುವಾಗ ನಮಗೆ ನಂಬಿಕೆ ಹುಟ್ಟದಿರಬಹುದು. ಈ ವ್ಯಕ್ತಿಗಳು, ಈ ಲಕ್ಷಣಗಳು ಬಲಹೀನನಾದ ಆದರೆ ಧರ್ಮಪ್ರಿಯನಾದ ಮನುಷ್ಯನು ಆತ್ಮತೃಪ್ತಿಗಾಗಿ ಕಟ್ಟಿಕೊಂಡ ರಂಜನ ಕಥೆಗಳಾಗಿ ತೋರಬಹುದು. ಆದರೆ, ಈಗ, ಭರತಭೂಮಿಯಲ್ಲಿ ಮಹಾತ್ಮ ಗಾಂಧಿಯವರ ದಿವ್ಯ ತೇಜಸ್ಸನ್ನು ಕಂಡು, ಅನುಭವಿಸಿ, ಯಥಾಶಕ್ತಿಯಾಗಿ ಹಿಂಬಾಲಿಸಿದ ಧೀರ ಭಾರತ ಪುತ್ರಪುತ್ರಿಯರಿಗೆ ಇದು ನಂಬತಕ್ಕ ವಿಷಯ, ಮಾನವ ಸಾಧನೆಗೆ ಒಳಪಟ್ಟ ಆದರ್ಶ, ನಿಸ್ಸಂಶಯವಾದ ಸತ್ಯ ಜೀವನ.

ಬಲಹೀನರಾದ ಜನರು ಇದೆಲ್ಲಾ ಅವತಾರಪುರುಷರಿಗೆ ಹೇಳಿದ್ದು ; ನಮ್ಮಿಂದ ಸಾಧ್ಯವಲ್ಲವೆಂದು ಕೈಕಟ್ಟಿಕೊಂಡು ಕುಳಿತುಕೊಳ್ಳದೆ, ಒಂದಲ್ಲ ಹತ್ತು ಕಡೆ ಈ ತತ್ತ್ವವನ್ನು ಕಂಡು, ನಂಬಿ, ನಡೆದು, ಆತ್ಮಲಾಭವನ್ನು ಪಡೆದು ಮುಕ್ತರಾಗಬೇಕೆಂಬ ಉದ್ದೇಶದಿಂದ ಮಹಾತ್ಮಜಿಯವರ ಶಿಷ್ಯರಾದ ಶ್ರೀಮಾನ್ ರಾಜಗೋಪಾಲಾಚಾರ್ಯರವರು ಈ ಸಣ್ಣ ಗ್ರಂಥವನ್ನು ಗ್ರೀಕ್ ಭಾಷೆಯಲ್ಲಿರುವ ಪ್ಲೇಟೋವಿನ ಸಂವಾದಗಳಿಂದ ಸಂಗ್ರಹಿಸಿ ತಮಿಳಿನಲ್ಲಿ ರಚಿಸಿದರು. ಅದನ್ನೇ ದೇಶಭಕ್ತರಾದ ಶ್ರೀಮಾನ್ ಸಂಪದ್ಗಿರಿರಾಯರು ಕನ್ನಡಿಗರ ಉಪಕಾರಕ್ಕಾಗಿ ಕನ್ನಡದಲ್ಲಿ ಬರೆದಿರುತ್ತಾರೆ. ಇದರಿಂದ ನಾಲ್ಕು ಜನ ಬಾಲಕರಲ್ಲಿ ಆತ್ಮಕಳೆ ಪ್ರಜ್ವಲಿತವಾದರೂ ತಾವು ಕೃತಾರ್ಥರೆಂದು ಅವರು ಭಾವಿಸುತ್ತಾರೆ.

ಬಿ. ಎಂ. ಶ್ರೀಕಂಠಯ್ಯ.

# ಉಪಕಾರ ಸ್ಮರಣೆ

ಸೋಕ್ರಟೀಸ್, ಪ್ಲೇಟೋ ಮತ್ತು ಅರಿಸ್ಟೋಟಲ್, ಈ ಗುರು ಶಿಷ್ಯ ಪರಂಪರೆಯವರು ಪ್ರಾಚೀನ ಗ್ರೀಕ್ ಸಂಸ್ಕೃತಿಗೆ (ಅರ್ಥಾತ್ ಐರೋಪ್ಯ ಸಂಸ್ಕೃತಿಗೆ) ಆಚಾರ್ಯ ಪುರುಷರಂತಿರುವರು. ಸೋಕ್ರಟೀಸಿನ ಶಿಷ್ಯನಾದ ಪ್ಲೇಟೋ ೩೬ ಗ್ರಂಥಗಳನ್ನು ರಚಿಸಿ ತನ್ನ ಗುರುವಾದ ಸೋಕ್ರಟೀಸಿನ ವಿಚಾರಸರಣಿಯನ್ನೂ ವಾದ ವಿಶೇಷವನ್ನೂ ಪ್ರಪಂಚಕ್ಕೆ ತಿಳಿಸಿರುವನು. ಇವುಗಳಲ್ಲಿ ಯುತಿಫ್ರ್ರ, ಅಪಾಲಜಿ, ಕ್ರಿಟೋ, ಮತ್ತು ಫೈಡೊ ಎನ್ನುವ ಗ್ರಂಥಗಳು ಒಂದು ಗುಂಪಿಗೆ ಸೇರಿದವು. ಯೂತಿಫ್ರಾನಿನಲ್ಲಿ ನ್ಯಾಯಸ್ಥಾನಕ್ಕೆ ಹೋಗುವುದಕ್ಕೆ ಮೊದಲು ಸೋಕ್ರಟೀಸನು ಯೂತಿಫ್ರಾನಿನೊಡನೆ ನ್ಯಾಯ, ದೈವಭಕ್ತಿ ಮುಂತಾದ ವಿಷಯದಲ್ಲಿ ಮಾಡಿದ ಜಿಜ್ಞಾಸವೂ ತನ್ನಮೇಲೆ ಮೇಲೇಟಸ್ಸನು ದೋಷಾರೋಪಣೆಯನ್ನು ಮಾಡಿದ ಕಾರಣವೂ ಪ್ರತಿಪಾದಿತವಾಗಿವೆ. ಅಪಾಲಜಿಯಲ್ಲಿ ಸೋಕ್ರಟೀಸನು ನ್ಯಾಯಾಧೀಶರ ಮುಂದೆ ಮಾಡಿದ ವ್ಯಾಖ್ಯಾನಗಳಿವೆ. ಕ್ರಿಟೋವಿನಲ್ಲಿ ತಾನು ಕಾರಾಗೃಹದಿಂದ ತಪ್ಪಿಸಿಕೊಂಡು ಹೋಗಬೇಕೆಂದು ಸೂಚಿಸುವ ಕ್ರಿಟೋವಿಗೆ ಹಾಗೆ ಮಾಡುವುದು ನ್ಯಾಯವಿರುದ್ಧವೆಂದು ಹೇಳಿದ ಸೋಕ್ರಟೀಸನ ಯುಕ್ತಿಪೂರ್ವಕವಾದ ಸಮಾಧಾನವಿದೆ. ಫೈಡೋವಿನಲ್ಲಿ ಸೋಕ್ರಟೀಸನ ಮರಣವೃತ್ತಾಂತವೂ, ಆತ್ಮದ ನಿತ್ಯತ್ವ ಮುಂತಾದ ವಿಚಾರಗಳ ಜಿಜ್ಞಾಸವೂ ವರ್ಣಿತವಾಗಿವೆ. ಈ ನಾಲ್ಕು ಗ್ರಂಥಗಳು ಇಂಗ್ಲೀಷಿನಲ್ಲಿ "ಸೋಕ್ರಟೀಸರ ವಿಚಾರಣೆ ಮತ್ತು ಮರಣ" ಎಂಬ ಹೆಸರಿನಿಂದ ಪ್ರಕಟಿತವಾಗಿ ಪ್ರಸಿದ್ಧಿ ಹೊಂದಿವೆ.

ಶ್ರೀಮಾನ್ ಸಿ. ರಾಜಗೋಪಾಲಾಚಾರ್ಯರು ವೇಲೂರ್ ಜೈಲಿನಲ್ಲಿ ೧೯೨೧ರಲ್ಲಿ ಇವುಗಳನ್ನು ಸಂಗ್ರಹಿಸಿ ತಮಿಳಿನಲ್ಲಿ ಬರೆದರು. ತಮಿಳು ಗ್ರಂಥಕ್ಕೆ 'ಸತ್ಯಾಗ್ರಹ ವಿಜಯ' ವೆಂಬ ಹೆಸರನ್ನಿಟ್ಟರು. ಸೋಕ್ರಟೀಸರ ಸ್ಥೂಲಪರಿಚಯವೂ ಅವರ ಮರಣ ವೃತ್ತಾಂತವೂ ನಮ್ಮವರಿಗೆ ತಿಳಿಯಬೇಕೆಂಬುದೇ ಅವರ ಆಶಯ. ಆದುದರಿಂದ ಶ್ರೀ ಆಚಾರ್ಯರು ಅಪಾಲಜಿ ಎಂಬ ಗ್ರಂಥವನ್ನೇ ಪ್ರಧಾನವಾಗಿಟ್ಟುಕೊಂಡು ಕ್ರಿಟೋ ಮತ್ತು ಫೈಡೋ ಎನ್ನುವ ಗ್ರಂಥಗಳನ್ನು ಬಹುಮಟ್ಟಿಗೆ ಸಂಗ್ರಹಿಸಿ, ಯೂತಿಫ್ರಾರ್ ಎನ್ನುವ ಗ್ರಂಥವನ್ನು ಬಿಟ್ಟಿರುವರು. ಅವರಿಚ್ಛಿಸಿದಂತೆ ಅವರ ಆಜ್ಞಾನುಸಾರ ಅದನ್ನು ನಾನು ಕನ್ನಡದಲ್ಲಿ ಬರೆದಿರುವೆನು. ಕೆಲವೆಡೆಗಳಲ್ಲಿ ಟಿಪ್ಪಣಿಗಳನ್ನು ಮಾತ್ರ ಹೊಸದಾಗಿ ಸೇರಿಸಿರುವೆನು. ನನ್ನಮೇಲೆ ಅಭಿಮಾನವಿಟ್ಟು ಈ ಕೆಲಸಕ್ಕೆ ನನ್ನನ್ನು ಪ್ರೇರಿಸಿದುದಕ್ಕಾಗಿ ನಾನವರಿಗೆ ಬಹಳ ಋಣಿಯಾಗಿರುವೆನು.

ಗ್ರೀಕ್ ಹೆಸರುಗಳಿಗೆ ಇಲ್ಲಿ ಕೊಟ್ಟಿರುವ ಉಚ್ಚಾರಣೆಯ ವಿಚಾರದಲ್ಲಿ ಹೆಚ್ಚು ಕಡಿಮೆ ಇರಬಹುದು. ಇದಕ್ಕೂ ಪುಸ್ತಕದಲ್ಲಿ ಉಳಿದಿರುವ ಮುದ್ರಣ ದೋಷಗಳಿಗೂ ವಾಚಕರ ಕ್ಷಮೆಯನ್ನು ಬೇಡುವೆನು.

ಭಾಷಾಂತರವನ್ನು ಪರಿಶೀಲಿಸಿ ಸಹಾಯ ಮಾಡಿದ ಶ್ರೀ ಎಲ್. ಗುಂಡಪ್ಪ ಮತ್ತು ಎ. ಕೆ. ಪುಟ್ಟರಾಮು, ಇದನ್ನು ಪ್ರಕಟಿಸುವುದಕ್ಕೆ ಪ್ರೋತ್ಸಾಹಿಸಿದ ಶ್ರೀ ಟಿ. ಟಿ. ಶರ್ಮನ್ ಈ ನನ್ನ ಮಿತ್ರರ ಉಪಕಾರವನ್ನು ಸ್ಮರಿಸುವೆನು.

ಈ ಸಣ್ಣ ಗ್ರಂಥಕ್ಕೆ ಮುನ್ನುಡಿಯನ್ನು ದಯಪಾಲಿಸಿದುದಕ್ಕಾಗಿ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರಿಗೆ ನನ್ನ ನಮಸ್ಕಾರ ಪೂರ್ವಕವಾದ ವಂದನೆಗಳನ್ನು ಸಮರ್ಪಿಸುವೆನು.

೧೩-೪-೧೯೩೧ — ಅನುವಾದಕ

# ಪ ರಿ ಚ ಯ



ಗ್ರೀಕ್ ಜ್ಞಾನಿಯಾದ ಸೋಕ್ರಟೀಸನು ಧರ್ಮಕ್ಕಾಗಿ ಪ್ರಾಣವನ್ನರ್ಪಣಮಾಡಿದ ಮಹಾತ್ಮರಲ್ಲೊಬ್ಬನು. ಅವನ ಅಂತ್ಯಕಾಲದ ಚರಿತ್ರೆಯನ್ನು ಕನ್ನಡನಾಡಿನ ಸ್ತ್ರೀಪುರುಷರು, ಮಕ್ಕಳು ತಿಳಿದುಕೊಳ್ಳುವುದು ಆವಶ್ಯಕ. ಅವನು ಈಗ್ಗೆ ಸುಮಾರು ೨,೪೦೦ ವರ್ಷಗಳ ಹಿಂದೆ ಗ್ರೀಸ್‌ದೇಶದ ಅಥೆನ್ಸ್ ನಗರದಲ್ಲಿ ಸುಮಾರು ಕ್ರಿ. ಪೂ. ೪೭೦ರಲ್ಲಿ ಜನ್ಮಧಾರಣ ಮಾಡಿದನು. ಅವನ ತಂದೆಯು ಶಿಲ್ಪಿ. ತಾಯಿ ಸೂಲಗಿತ್ತಿ. ಸೋಕ್ರಟೀಸನು ತನ್ನ ತನುಮನ ಸರ್ವಸ್ವವನ್ನು ಸತ್ಯದ ಅರಿವಿಗಾಗಿ ಮೀಸಲಿಟ್ಟು ತನ್ನ ಗೃಹಕೃತ್ಯವನ್ನು ಸಹ ಲೆಕ್ಕಿಸದೆ೧ ಸತ್ಯದ ವಿಚಾರದಲ್ಲಿ ಮಗ್ನನಾಗಿ ಜನಗಳೊಡನೆ ಸಂಭಾಷಿಸಿ, ತನ್ಮೂಲಕ ಧರ್ಮೋಪದೇಶವನ್ನು ಮಾಡುವುದರಲ್ಲಿಯೇ ತನ್ನ ಜೀವನವನ್ನು ಕಳೆದನು.

ಸೋಕ್ರಟೀಸನ ಕಾಲದಲ್ಲಿ ಅಥೆನ್ಸ್ ನಗರವು ಅತ್ಯುನ್ನತ ಕೀರ್ತಿಯನ್ನು ಪಡೆದು ಸ್ವತಂತ್ರ ರಾಜ್ಯಾಂಗವಾಗಿ ಬೆಳಗುತ್ತಿತ್ತು. ಆ ನಗರದಲ್ಲಿ ಕಾಳಿದಾಸ ಭವಭೂತಿಗಳಿಗೆ ಸಮಾನರಾದ ಕವಿಶ್ರೇಷ್ಠರೂ, ನಾಟಕಕರ್ತರೂ, ಅತ್ಯುತ್ತಮವಾದ ಇತಿಹಾಸ ಲೇಖ

೧. ಸೋಕ್ರಟೀಸನು ಮನೆಯಲ್ಲಿರದೆ ದಿನವೆಲ್ಲವೂ ಹೊರಗೇ ಕಾಲವನ್ನು ಕಳೆಯುತ್ತಿದ್ದನಂತೆ. ತನ್ನ ಹೆಂಡತಿಯಾದ ಜಾಂತಿಪ್ಪಿಯ ದೌರ್ಜನ್ಯವೇ ಇದಕ್ಕೆ ಕಾರಣವಿರಬಹುದೆಂದು ಒಂದು ಊಹೆ. ಆಕೆಯ ಸ್ವಭಾವವೇನೋ ಅಂತಹುದೆನ್ನುವುದಕ್ಕೆ ಸಂದೇಹವಿಲ್ಲ. ಆದರೆ ಸೋಕ್ರಟೀಸನು ಅದನ್ನು ಲಕ್ಷಿಸದೆ ಶಾಂತಚಿತ್ತನಾಗಿಯೇ ಇರುತ್ತಿದ್ದನು. ಮತ್ತು ಆಕೆಯಲ್ಲಿ ವಿಧೇಯನಾಗಿಯೇ ಇರುವುದು ಕರ್ತವ್ಯವೆಂದು ತನ್ನ ಮಕ್ಕಳಿಗೆ ಸಹ ಬೋಧಿಸುತ್ತಿದ್ದನು.

ಕರೂ, ಪೌರಾಣಿಕರೂ, ಶಿಲ್ಪಿಗಳೂ, ರಾಜಶಾಸ್ತ್ರಜ್ಞರೂ ಅನೇಕರಿದ್ದರು. [1]ಅಥೆನ್ಸ್ ನಗರದ ಕೀರ್ತಿಯು ಉಜ್ಜಯಿನಿ ಪಾಟಲಿಪುತ್ರಗಳಂತೆ ಅನ್ಯದೇಶಗಳಲ್ಲಿಯೂ ವ್ಯಾಪಿಸಿತ್ತು.

ಅಥೆನ್ಸ್ ನಗರದ ರಾಜ್ಯವ್ಯವಸ್ಥೆಯನ್ನು ಜನಪದದ ಅಧಿಕಾರವೆನ್ನಬಹುದು (ರಿಪಬ್ಲಿಕ್) [2] ಅಂದರೆ ಪ್ರಜಾಸಮೂಹದ ಪ್ರಭುತ್ವ. ನಗರದಲ್ಲಿ ಪ್ರಜೆಗಳನೇಕರು ಕೂಡಿದ ಮಹಾ ಸಭೆಯೇ ಸರ್ವಾಧಿಕಾರವನ್ನು ವಹಿಸಿತ್ತು. ಮಹಾಸಭೆ ಸೇರುವ ಕಾಲದಲ್ಲಿ ಪ್ರತಿಯೊಬ್ಬರೂ ತಪ್ಪದೆ ಇರಬೇಕೆಂದು ನಿಯಮ. ಪ್ರಜೆಗಳು ತಮ್ಮ ಪರವಾಗಿ ಕೆಲವು ಪ್ರತಿನಿಧಿಗಳನ್ನು ಮಹಾಸಭೆಗೆ ಕಳಿಸುವ ಪದ್ಧತಿಯು

೧. ಸೋಕ್ರಟೀಸನ ಸಮಕಾಲೀನರಾದ ಗ್ರೀಕ್ ಮಹಾವಿಭೂತಿಗಳು:

ಏಸ್ಕೈಲಸ್—ಮಹಾಕವಿ ಸುಮಾರು ಕ್ರಿ. ಪೂ. ೪೫೬ರಲ್ಲಿ ಕಾಲವಾದನು.

ಸೋಫಾಕ್ಲಿಸ್—ಮಹಾಕವಿ ಸುಮಾರು ಕ್ರಿ. ಪೂ. ೪೯೫-೪೦೬.

ಯೂರಿಪಿಡಿಸ್—ಮಹಾಕವಿ ಸುಮಾರು ಕ್ರಿ. ಪೂ. ೪೮೧-೪೦೬.

ಅರಿಸ್ಟೊಫಾನೆಸ್—ನಾಟಕಕರ್ತನು. ಸುಮಾರು ಕ್ರಿ. ಪೂ. ೪೪೮ರಲ್ಲಿ ಜನ್ಮವೆತ್ತಿದನು.

ಫಿಡಿಯಾಸ್—ಪ್ರಸಿದ್ಧ ಶಿಲ್ಪಿ ಕ್ರಿ. ಪೂ. ೪೩೨ರಲ್ಲಿ ಕಾಲವಾದನು.

ಇಕ್ಟಿನಸ್—ಪಾರ್ಥನಾನ್ ಕಟ್ಟಡವನ್ನು ಈತನು ಕ್ರಿ.ಪೂ. ೪೩೮ರಲ್ಲಿ ಮುಗಿಸಿದನು.

ಪೆರಿಕ್ಲಿಸ್—ರಾಜತಂತ್ರವಿಶಾರದನು. ಕ್ರಿ. ಪೂ. ೪೨೯ರಲ್ಲಿ ಕಾಲವಾದನು.

ಥ್ಯೂಸಿಡೈಡಿಸ್—ಇತಿಹಾಸ ಲೇಖಕನು. ಕ್ರಿ. ಪೂ. ೪೭೧ರಲ್ಲಿ ಜನ್ಮವೆತ್ತಿದನು.

೨. ಅಥೆನ್ಸ್ ನಗರದ ಪ್ರಜಾಸಂಖ್ಯೆ ಸುಮಾರು ೧೫,೦೦೦ ಮಾತ್ರವೇ ಇದ್ದರೂ ಈ ಪುರನಿವಾಸಿಗಳಲ್ಲಿ ಉಜ್ವಲವಾದ ರಾಜಕೀಯ ವ್ಯವಹಾರಜ್ಞಾನವಿತ್ತೆಂದು ಉಲ್ಲೇಖನಗಳಿವೆ. ಗ್ರೀಕರು ಪೂರ್ವಕಾಲದ ಆರ್ಯಜನಾಂಗದ ಶಾಖೆ. ಆರ್ಯರಲ್ಲಿದ್ದ ಸಂಪ್ರದಾಯಕ್ಕನುಸಾರವಾಗಿ ಮನೆತನಗಳ ಯಜಮಾನರು ಮತ್ತು ಕಸಬುದಾರರು, ವರ್ತಕರು, ಶ್ರೀಮಂತರುಗಳು ನಗರದ ಆಡಳಿತವನ್ನು ನಿರ್ವಹಿಸುತ್ತಿದ್ದರು. ಸೋಕ್ರಟೀಸನ ಕಾಲಕ್ಕೆ ಸಾಮಾನ್ಯ ಜನರಿಗೂ ಸಣ್ಣ ಕಸಬುದಾರರಿಗೂ ಸಹ ಈ ಪ್ರಾತಿನಿಧ್ಯವಿತ್ತು. ಸುಮಾರು ೫೦೦ ಜನರಿಂದ ಕೂಡಿದ ನ್ಯಾಯಸಭೆಯಲ್ಲಿ ಪ್ರತಿಯೊಬ್ಬ ಪುರನಿವಾಸಿಗೂ ಸ್ಥಳ ದೊರೆಯುವ ಅವಕಾಶವಿತ್ತು.

ಇರಲಿಲ್ಲ. ಪ್ರತ್ಯಕ್ಷವಾಗಿ ಅವರೇ ಸಭೆಸೇರಿ ರಾಜ್ಯವ್ಯವಹಾರ ಗಳನ್ನು ನಡೆಸುತ್ತಬಂದರು. ನ್ಯಾಯವಿಚಾರಣೆಯ ವಿಧಾನ ದಲ್ಲಿಯೂ ಇದೇ ರೀತಿ ಎಲ್ಲರೂ ಅಧಿಕಾರವನ್ನು ವಹಿಸುತ್ತಿದ್ದರು. ವ್ಯವಹಾರಗಳನ್ನು ವಿಚಾರಿಸಿ ತೀರ್ಮಾನಿಸುವ ನ್ಯಾಯಾಧೀಶರನ್ನು ಜನಗಳೇ ಚೀಟಿಗಳನ್ನು ಹಾಕಿ ಚುನಾಯಿಸುತ್ತಿದ್ದರು. ಆ ನ್ಯಾಯಾ ಧೀಶರು ನ್ಯಾಯಸ್ಥಾನದಲ್ಲಿ ಕುಳಿತು ತಮ್ಮ ಕರ್ತವ್ಯವನ್ನು ಮಾಡು ವರು. ನಗರ ನಿವಾಸಿಗಳಲ್ಲಿ ಪ್ರತಿಯೊಬ್ಬರೂ ಈ ರೀತಿಯಾಗಿ ನ್ಯಾಯಸ್ಥಾನಕ್ಕೆ ಸೇರಿಸಲ್ಪಡಲು ಅರ್ಹರಾಗಿದ್ದರು.

ಪೋಟೀಡಿಯಾ ಎಂಬ ಊರಿನ ಮುತ್ತಿಗೆಯಲ್ಲಿ (ಕ್ರಿ ಪೂ. ೪೩೨-೪೩೦) ಸೋಕ್ರಟೀಸನು ತನ್ನ ತಾಯ್ನಾಡಿನ ಸ್ವಾತಂತ್ರ್ಯದ ರಕ್ಷಣೆಗಾಗಿ ಅಥೆನ್ಸಿನವ ಹೊರಟ ಸೈನ್ಯದಲ್ಲಿ ಸೇರಿದ್ದನು. ಅವನು ಹಸಿವು, ನೀರಡಿಕೆ, ಚಳಿ ಇವುಗಳನ್ನು ಲಕ್ಷಿಸದೆ ಬಹು ಪರಾಕ್ರಮ ದಿಂದ ಯುದ್ಧದಲ್ಲಿ ತನ್ನ ಕರ್ತವ್ಯವನ್ನು ಪಾಲಿಸಿದನು. ಆ ಸಮ ಯದಲ್ಲಿ ವೀರನಾದ ಆಲ್ಕಿಬಿಯಾಡಿಸಿನ ಪ್ರಾಣವನ್ನು ರಕ್ಷಿಸುದುದು ಮಾತ್ರವಲ್ಲದೆ ಅನಂತರ ಅಥೆನ್ಸ್ ಮಹಾಜನರು ಆ ಯುದ್ಧದಲ್ಲಿ ಸಾಹಸಕಾರ್ಯಗಳನ್ನು ಮಾಡಿದುದಕ್ಕಾಗಿ ಕೊಟ್ಟ ಬಿರುದು ಬಹು ಮಾನಗಳನ್ನು ಆಲ್ಕಿಬಿಯಾಡಿಸನೇ ಪಡೆಯಬೇಕೆಂದು, ತಾನು ಮಾಡಿದ ವೀರಸಾಹಸಗಳನ್ನು ಮುಂದಿಡದೆ ಮರೆಸಿಬಿಟ್ಟನು. ಅನಂ ತರ ಮತ್ತೊಂದು ಯುದ್ಧ ನಡೆಯಿತು. ಅದರಲ್ಲಿ ಒಮ್ಮೆ ಅಥೆನ್ಸಿನ ವರು ಪೂರ್ತಿಯಾಗಿ ಸೋತುಹೋದರು (ಕ್ರಿ. ಪೂ. ೪೨೪). ಆ ಸಮಯದಲ್ಲಿ ಸೈನ್ಯವು ಭೀತಿಯಿಂದ, ದಿಕ್ಕುತೋರದೆ, ನಾನಾಕಡೆಗೆ ಚದರಿ ಓಡಿತು. ಆಗ ಮನಗೆಡದೆ, ಧೈರ್ಯಗುಂದದೆ, ಸಜ್ಜಾಗಿ ಹೆಮ್ಮೆಟ್ಟದವರು ಕೆಲವರು ಮಾತ್ರ ಅಂತಹವರಲ್ಲಿ ಸೋಕ್ರಟೀಸ ನೊಬ್ಬನು. ಸ್ವಲ್ಪಕಾಲವಾದನಂತರ ಅಂಫಿಪಾಲಿಸ್‌ನಲ್ಲಿ ನಡೆದ ಯು ದ್ಧದಲ್ಲಿಯೂ (ಕ್ರಿ. ಪೂ. ೪೨೨) ಸೋಕ್ರಟೀಸನು ಮೂರನೆಯಸಲ ಅಥೆನ್ಸ್ ನಗರದ ಸೈನ್ಯದಲ್ಲಿ ಸೇರಿ ಕರ್ತವ್ಯಪರಾಯಣನಾದನು.

ಸಾಮಾನ್ಯವಾಗಿ ಸಾಧುಗಳು, ಜ್ಞಾನಿಗಳು ವೀರಕೃತ್ಯಗಳನ್ನು ಮಾಡಲಾಗದವರೆಂದು ಭಾವಿಸುವುದೂ, ಹೇಳುವುದೂ ಉಂಟು. ಹಾಗೆ ಭಾವಿಸುವುದೂ, ಹೇಳುವುದೂ ತಪ್ಪೆಂದೂ, ಧೈರ್ಯವೂ, ಜ್ಞಾನವೂ, ಸಾತ್ವಿಕಜೀವನವೂ, ಸಮ್ಮಿಳಿತವಾಗಿರಬಹುದೆಂದೂ ಸೋಕ್ರಟೀಸನ ಚರಿತ್ರೆಯಿಂದಲೂ ಇತರ ಮಹಾತ್ಮರ ಚರಿತ್ರೆಗಳಿಂದಲೂ ನಾವು ತಿಳಿಯಬಹುದು.

ಸೊಕ್ರಟೀಸನು ಜನ್ಮವೆತ್ತಿದ ಕಾಲವು ಗ್ರೀಸ್‌ದೇಶದ ಜನಜೀವನದಲ್ಲಿ ಒಂದು ಪರ್ವಕಾಲವಾಗಿತ್ತು. ಪುರಾತನ ಧರ್ಮವನ್ನೂ ಮತವನ್ನೂ ಅಲ್ಲಗಳೆದು, ಹಳೆಯ ಸಿದ್ಧಾಂತಗಳನ್ನು ಮೂಲೆಗಿಡುವ ಸಾಹಸವನ್ನು ಕೆಲವರು ಮಾಡಿದರು. ೧ ಈ ವಿಧವಾದ

---

೧. ಈ ಕಾಲದಲ್ಲಿ ಸ್ವತಂತ್ರ ವಿಚಾರವು ಬಹಳಮಟ್ಟಿಗೆ ಮುಂದುವರಿದಿತ್ತು. ಪೂರ್ವದಲ್ಲಿ ಗ್ರೀಕರು ಆಚರಿಸುತ್ತಿದ್ದ ದೇವತೆಗಳ ಆರಾಧನೆ, ಯಜ್ಞ, ಯಾಗ ಮುಂತಾದವುಗಳಲ್ಲಿ ಅನಾದರಣೆಯನ್ನು ತೋರಿ ಕೆಲವು ದಾರ್ಶನಿಕರು ನಮ್ಮ ವೈಶೇಷಿಕಕ್ಕೆ ಹೋಲಿಸಬಹುದಾದ ಹೊಸ ಸಿದ್ಧಾಂತವನ್ನು ಪ್ರಚಾರಪಡಿಸಿ, ಪಂಚಭೂತಗಳ ಸೃಷ್ಟಿಸ್ಥಿತಿಲಯ ಇವುಗಳನ್ನು ಜಿಜ್ಞಾಸಮಾಡಿ, ದೇವತೆಗಳಲ್ಲಿ ಜನರಿಟ್ಟಿದ್ದ ಅಂಧಶ್ರದ್ಧೆಯನ್ನು ದೂರ ಮಾಡಿದರು. ಇವರನ್ನು ಭೌತಿಕಶಾಸಜ್ಞರೆಂದು ಕರೆಯಬಹುದು.

ರಾಜಕಾರಣದಲ್ಲಿ ಮಗ್ನರಾಗಿ ಜನರು ಪೂರ್ವಾಪರ ವಾದಗಳನ್ನು ಮಾಡುವುದೂ, ಅವುಗಳನ್ನು ಕೇಳಿ ಸತ್ಯಾಂಶವನ್ನು ನಿರ್ಣಯಿಸುವುದೂ ಇವೇ ಮೊದಲಾದ ಶಕ್ತಿಗಳು, ಹೆಚ್ಚುವಂತೆ ಯುವಕರ ಶಿಕ್ಷಣವನ್ನು ಸುಧಾರಿಸಬೇಕೆಂದು ಕಾವ್ಯ, ತರ್ಕ, ಮುಂತಾದ ಶಾಸ್ತ್ರಗಳ ವ್ಯಾಸಂಗಕ್ಕೆ ಇವರನ್ನು ಕಳುಹಿಸುತ್ತಿದ್ದರು. ಇವುಗಳನ್ನು ಕಲಿಸುವ ಪಂಡಿತರು ಆಥೆನ್ಸಿನಲ್ಲಿ ಅನೇಕರಿದ್ದರು. ಇವರಿಗೇ ಸಾಫಿಸ್ಟ್ಸ ಎಂದು ಹೆಸರು.

ಸುಶಿಕ್ಷಿತರಾದ ಯುವಕರ ಸ್ವತಂತ್ರ ವಿಚಾರಧೋರಣೆಯನ್ನೂ ವಾಕ್ಪಟುತ್ವವನ್ನೂ ನೋಡಿ ಪೂರ್ವಾಚಾರಗಳಲ್ಲ ಅಭಿಮಾನವುಳ್ಳವರು ಭೌತಿಕಶಾಸ್ತ್ರಜ್ಞರು ನಿರೀಶ್ವರವಾದ ಅಥವಾ ನಾಸ್ತಿಕವಾದ ಮಾಡುವವರೆಂತಲೂ, ಸಾಫಿಸ್ಟರು ಕುತರ್ಕವನ್ನೂ, ವಿತಂಡವಾದವನ್ನೂ ಯುವಕರಿಗೆ ಕಲಿಸುತ್ತಿರುವವರೆಂತಲೂ, ಅಭಿಪ್ರಾಯಪಟ್ಟರು.

ಹೊಸ ಆಕಾಂಕ್ಷೆಯು ಅಧರ್ಮಕ್ಕೆ ಎಡಕೊಡುವುದೆಂದು ಭಾವಿಸಿ ಅಥೆನ್ಸಿನಲ್ಲಿದ್ದ ಲೋಕಪ್ರಸಿದ್ಧ ನಾಟಕಕರ್ತನಾದ ಅರಿಸ್ಟೊಫಾನಿಸ್ಸನು ೧ ಈ ಆಧುನಿಕರ ಸೊಕ್ಕನ್ನಡಗಿಸಲು ಬಹಳ ಪ್ರಯತ್ನಪಟ್ಟನು.

ಸೋಕ್ರಟೀಸನ ನಿಜವಾದ ತತ್ವಗಳನ್ನೂ ಧರ್ಮೋಪದೇಶವನ್ನೂ ಅರಿಸ್ಟೊಫಾನಿಸ್ಸನು ತಿಳಿದುಕೊಳ್ಳದೆ ಅವನೂ ಈ ಹೊಸ ನಾಸ್ತಿಕಮತಕ್ಕೆ ಸೇರಿದವನೆಂದೆಣಿಸಿ ಒಂದು ನಾಟಕವನ್ನು ಬರೆದನು. ಅಥೆನ್ಸಿನ ಪುರನಿವಾಸಿಗಳು ನಾಟಕಗಳನ್ನು ನೋಡುವುದರಲ್ಲಿಯೂ ಓದುವದರಲ್ಲಿಯೂ ಬಹಳ ಆಸಕ್ತರು. ಸೊಕ್ರಟೀಸನಿಗೆ ಕುರೂಪವಾದ ಮುಖ, ತಟ್ಟೆಯಾದ ಮೂಗು, ಮೊಟ್ಟೆಗಳಂತೆ ದೊಡ್ಡದಾಗಿ ಮುಂದಕ್ಕೆ ಬಂದಿರುವ ಕಣ್ಣುಗಳು. ಅವನ ಬಟ್ಟೆಹರಿದುದು, ಮಾಸಿ

---

ಈ ಮೇಲೆಹೇಳಿದ ಯಾವ ಪಂಗಡಕ್ಕೂ ಸೋಕ್ರಟೀಸನು ಸೇರಿದವನಲ್ಲ. ಅವನು ಎಲ್ಲ ಸಿದ್ಧಾಂತಗಳನ್ನೂ ನಿರ್ದಾಕ್ಷಿಣ್ಯವಾದ ಪರೀಕ್ಷೆಗೆ ಗುರಿಮಾಡಿದ್ದಾನೆ. ಅವನ ನಿರ್ಭಯವಾದ ವಿಚಾರಪರತೆಗಾಗಿಯೇ ಅವನಲ್ಲಿ ದೋಷಗಳನ್ನು ಆರೋಪಿಸಿದರು.

೧. ಈತನು ಸುಮಾರು ೫೦ ನಾಟಕಗಳನ್ನು ರಚಿಸಿದನಂತೆ. ಅವುಗಳಲ್ಲಿ ೧೧ ಮಾತ್ರ ಉಳಿದಿವೆ. ಈತನು ಪೂರ್ವಾಚಾರಗಳಲ್ಲಿ ಶ್ರದ್ಧೆಯುಳ್ಳವನು. ನೀತಿ ರೀತಿಇಲ್ಲದ ಕ್ರಾಂತಿಕಾರಕ ವಿಚಾರಗಳಿಂದ ದೇಶಕ್ಕೆ ಕೇಡಾಗುವುದೆಂದೆಣಿಸಿ ತನ್ನ ನಾಟಕಗಳಲ್ಲಿ ವಿಡಂಬನಾಪೂರಿತವಾದ ದೃಶ್ಯಗಳನ್ನು ಬರೆದು, ಹೊಸ ವಿಚಾರಗಳನ್ನು ಅಲ್ಲಗಳೆದನು. ಸೋಕ್ರಟೀಸನು ತನ್ನ ಮಿತ್ರನಾದರೂ ಸಹ ಅವನನ್ನೂ ಬಿಡದೆ ಕ್ರಿ. ಪೂ. ೪೨೩ರಲ್ಲಿ 'ಮೇಘಗಳು' ಎಂಬ ನಾಟಕವನ್ನು ರಚಿಸಿ ಅದರಲ್ಲಿ ಅವನನ್ನು ಚಿತ್ರಿಸಿರುವನು. ಒಬ್ಬ ತಂದೆಯು ತನ್ನ ಮಗನು ಸತ್ಪ್ರವರ್ತಕನಾಗಬೇಕೆಂದು ಅವನನ್ನು ಗುರುವಿನ ಬಳಿಗೆ ಕಳುಹಿಸುವನು. ಆದರೆ ಗುರುಕುಲವಾಸದಿಂದ ಹಿಂತಿರುಗಿದ ಆ ಯುವಕನು ತಂದೆಯಲ್ಲಿ ಮರ್ಯಾದೆಯನ್ನು ತಪ್ಪಿ ವರ್ತಿಸುವನು. ತಂದೆಯು ದುಃಖಿತನಾಗಿ ಬಹಳ ಕೋಪಗೊಂಡು ಗುರುವಿನ ಮನೆಗೆ ಬೆಂಕಿ ಹಾಕುವನು. ಇದೇ ನಾಟಕದ ಸಾರಾಂಶ. ಇದರಲ್ಲಿ ಸೋಕ್ರಟೀಸನೇ ಈ ಗುರುವೆಂದು ನಾಟಕ ಕರ್ತನು ಸೂಚಿಸಿರುವನು.

ದುದು. ಹುಚ್ಚು ಬೈರಾಗಿಯಂತೆ ಬೀದಿಬೀದಿಯಲ್ಲಿ ಅಲೆಯುತ್ತ ಎಲ್ಲಿ ಅಂದರೆ ಅಲ್ಲಿ ನಿಂತು ಮಾತನಾಡುವನು. ಈ ವ್ಯಕ್ತಿಯ ಪರಿಚಯವಿಲ್ಲದ ಅಥೆನ್ಸಿನವನಿರಲಿಲ್ಲ. ಇಂತಹ ವಿಚಿತ್ರವ್ಯಕ್ತಿಯು ಊರಲ್ಲಿದ್ದುದನ್ನು ಲಕ್ಷ್ಯದಲ್ಲಿಟ್ಟುಕೊಂಡು ಅರಿಸ್ಟೊಫಾನಿಸ್ಸನು ತಾನು ರಚಿಸಿದ ನಾಟಕದಲ್ಲಿ ಇವನನ್ನು ಹೊಸ ನಾಸ್ತಿಕ ಸಿದ್ಧಾಂತಕ್ಕೆ ನಾಯಕನನ್ನಾಗಿ ಮಾಡಿಬಿಟ್ಟನು.

ಯುವಕರ ರೀತಿನೀತಿಗಳನ್ನು ಶುಷ್ಕತಾರ್ಕಿಕರು ಕೆಡಿಸಿ, ಸುಳ್ಳನ್ನು ನಿಜವೆಂದೂ, ನಿಜವನ್ನು ಸುಳ್ಳೆಂದೂ ವಿತಂಡವಾದವನ್ನು ಹೂಡುವರೆಂದೂ ಅವರಮೇಲೆ ಪುರಾತನಮಾರ್ಗಾವಲಂಬಿಗಳಿಗೆ ಬಹಳ ಕ್ರೋಧವುಂಟಾಗಿತ್ತು. ಸೊಕ್ರಟೀಸನನ್ನು ಈ ಶುಷ್ಕತಾರ್ಕಿಕರಲ್ಲೊಬ್ಬನೆಂದು ಭಾವಿಸಿ, ನಾಟಕವನ್ನು ರಚಿಸಿ, ಅರಿಸ್ಟೊಫಾನಿಸ್ಸನು ಆತನ ಮೇಲೆ ಜನರಿಗೆ ಬಹಳ ರೋಷಾವೇಶಬರುವಂತೆ ಮಾಡಿದನು. ನಾಸ್ತಿಕರನ್ನೂ, ಈ ಶುಷ್ಕತಾರ್ಕಿಕರನ್ನೂ ಸೋಕ್ರಟೀಸನು ಬಲವಾಗಿ ಎದುರಿಸಿ ಅವರ ದುರ್ಬೋಧನೆಗಳನ್ನು ಖಂಡಿಸುತ್ತಿದ್ದರೂ ಆತನ ನಿಜವಾದ ಬೋಧನೆಗಳನ್ನು ಜನರು ತಿಳಿದುಕೊಳ್ಳಲಿಲ್ಲ. ಅವನು ಸಹ ಯುವಕರ ಬುದ್ಧಿಯನ್ನು ಕೆಡಿಸಿ, ನಾಸ್ತಿಕತೆಯನ್ನು ಬೋಧಿಸಿ, ಅವರ ರೀತಿನೀತಿಗಳನ್ನು ನಾಶಗೊಳಿಸುತ್ತಿರುವನೆಂದು ಅವನ ವಿಷಯದಲ್ಲಿ ದೊಡ್ಡ ಆಪಾದನೆಯನ್ನು ಮಾಡಿ, ಅವನನ್ನು ಶಿಕ್ಷೆಗೆ ಗುರಿಮಾಡಬೇಕೆಂದು ಜನಗಳು (ಕ್ರಿ ಪೂ. ೩೯೯) ಬಯಸಿದರು.

ಆ ವಿಚಾರಣೆಯ ಕಾಲದಲ್ಲಿ ಸೋಕ್ರಟೀಸನು ಮಾಡಿದ ವ್ಯಾಖ್ಯಾನಗಳೂ, ಅನಂತರ ಮರಣದಂಡನೆಯನ್ನು ಇದಿರುನೋಡುತ್ತ ಕಾರಾಗೃಹದಲ್ಲಿರುವಾಗ ಅವನಿಗೂ ಅವನ ಆಪ್ತಸ್ನೇಹಿತರಿಗೂ ನಡೆದ ಸಂಭಾಷಣೆಗಳೂ, ಅವನು ಮರಣವನ್ನು ಹೊಂದಿದ ವೃತ್ತಾಂತವೂ ಗ್ರೀಕ್ ಭಾಷೆಯಲ್ಲಿ ಗ್ರಂಥಗಳಾಗಿ ರಚಿಸಲ್ಪಟ್ಟಿವೆ. ಇಂಗ್ಲೀಷಿನಲ್ಲಿ ಅವುಗಳ ಭಾಷಾಂತರಗಳಿವೆ. ಕನ್ನಡಿಗರ ತಿಳಿವಳಿಕೆಗಾಗಿ ಇಲ್ಲಿ ಆ ಗ್ರಂಥಗಳ ಸ್ವಲ್ಪಭಾಗವನ್ನು ಎತ್ತಿಬರೆದಿದೆ.

# ನ್ಯಾಯಸ್ಥಾನದಲ್ಲಿ



ಗ್ರೀಕರು ತಮ್ಮ ಪುರಾತನ ಮತಕ್ಕನುಸಾರವಾಗಿ ಪೂಜಿಸುತ್ತಿದ್ದ ದೇವತೆಗಳನ್ನು ಸುಳ್ಳುದೇವತೆಗಳೆಂದು ನೆನೆದು ಹೊಸ ದೇವತೆಗಳನ್ನು ನಿರ್ಮಾಣಮಾಡಿದಹಾಗೂ, ಯುವಕರನ್ನು ಭ್ರಮೆಗೊಳಿಸಿ ಅವರು ನೀತಿಯನ್ನಗಲಿ ನಡೆಯುವಂತೆ ಮಾಡಿದ ಹಾಗೂ ಸೊಕ್ರಟೀಸನ ಮೇಲೆ ಅಪರಾಧಗಳನ್ನಾರೋಪಿಸಿದರು. ನ್ಯಾಯಸ್ಥಾನದಲ್ಲಿ ೫೦೦ ಮಂದಿಯಿದ್ದರು. ಇವರಲ್ಲದೆ ಅಧ್ಯಕ್ಷರೆಂದು ನ್ಯಾಯಸ್ಥಾನದಲ್ಲಿ ಪ್ರತ್ಯೇಕವಾಗಿ ಯಾರೂ ಕೂಡುವುದಿಲ್ಲ. ವಿಚಾರಣೆಯಲ್ಲಿ ಮೇಲೇಟಸ್ ಎಂಬ ಪೂರ್ಣವಯಸ್ಕನಾದ ಕವಿಯೊಬ್ಬನು ವಾದಿಯಾಗಿ ನಿಂತನು. ಮತ್ತು ಅನೀಟಸ್ ನೆಂಬುವ ವಾಚಾಳಿಯಾದ ಚರ್ಮವ್ಯಾಪಾರಿಯು ವಾದಿಯಕಡೆ ನಿಂತು ಸೋಕ್ರಟೀಸನ ಮೇಲೆ ಮೊಕದ್ದಮೆಯನ್ನು ನಡೆಸಿದನು. ಇವನು ಆಥೆನ್ಸ್ ನಗರದ ಸಾರ್ವಜನಿಕ ಸರಕಾರದಿಂದ ನಿವೃತ್ತನಾಗಿ, ಅನಂತರ ಜನಗಳ ಪರವಾಗಿ ವಾದವಿವಾದಗಳನ್ನು ನಡೆಸುತ್ತಿದ್ದುದರಿಂದ ದೊಡ್ಡ ವಾಗ್ಮಿಯಾಗಿದ್ದನು.

ವಾದಿಯಾದ ಮೇಲೇಟಸನೂ ಅವನಿಗೆ ಸಹಾಯಕನಾದ ಅನೀಟಸನೂ ಮತ್ತೊಬ್ಬನೂ ಸೋಕ್ರಟೀಸನ ತಪ್ಪನ್ನು ರುಜುವಾತು ಮಾಡಲು ವಾದಗಳನ್ನು ಹೂಡಿದರು. ಅನಂತರ ತಾನು ನಿರಪರಾಧಿಯೆಂದು ದೃಢಪಡಿಸಲು ಸೊಕ್ರಟೀಸನು ಮಾತನಾಡಿದನು. ಅವನ ಮೊದಲನೆಯ ವ್ಯಾಖ್ಯಾನವು ಮುಗಿದಕೂಡಲೆ ನ್ಯಾಯವಿಚಾರಣೆಯ ಸಭೆಯವರು ಅಪರಾಧವು ಸಿದ್ಧವಾಯಿತೆ ಇಲ್ಲವೆ ಎಂಬುದನ್ನು ನಿರ್ಧರಿಸಲು ತಮ್ಮ ಮತವನ್ನು ಕೊಟ್ಟರು ೨೮೦ ಸದಸ್ಯರು ಸೋಕ್ರಟೀ

ಸನು ಅಪರಾಧಿಯೆಂದೂ, ೨೨೦ ಸದಸ್ಯರು ಅವನು ನಿರಪರಾಧಿ ಯೆಂದೂ ಹೇಳಿದರು. ಅನಂತರ ವಿಧಿಸಬೇಕಾದ ಶಿಕ್ಷೆಯನ್ನು ಕುರಿತು ವಾದಿಯು ಮತ್ತೆ ಮಾತನಾಡಿದನು. ಮರಣದಂಡನೆ ಯನ್ನೇ ಕೊಡಬೇಕೆಂದು ಅವನು ಸಾಧಿಸಿದನು. ಆಮೇಲೆ ಬೇಕಾ ದರೆ ಅಪರಾಧಿಯು ಶಿಕ್ಷೆಯನ್ನು ಕಡಿಮೆ ಮಾಡುವುದಕ್ಕೆ ಕಾರಣ ವನ್ನು ಹೇಳಿ ವಾದಿಸುವುದು ಕ್ರಮವಾಗಿತ್ತು. ಈ ಕ್ರಮದ ಪ್ರಕಾರ ಸೋಕ್ರಟೀಸನು ಉಪಸಂಹಾರಭಾಷಣ ಮಾಡಿದಮೇಲೆ ಸಭೆಯ ವರು ಮರಣದಂಡನೆಯನ್ನೇ ಸ್ಥಿರಪಡಿಸಿದರು. ಅದಾದಮೇಲೆ ಸೋಕ್ರಟೀಸನು ಮತ್ತೊಮ್ಮೆ ಮಾತನಾಡಿದನು. ಅನಂತರ ಅವ ನನ್ನು ಕಾರಾಗೃಹಕ್ಕೆ ಕರೆದುಕೊಂಡು ಹೋದರು.

## ಸೋಕ್ರಟೀಸನ ವ್ಯಾಖ್ಯಾನ

### ೧

ಅಥೆನ್ಸಿನ ಪುರನಿವಾಸಿಗಳೇ !

ವಾದಿಗಳ ವ್ಯಾಖ್ಯಾನಗಳನ್ನು ನೀವು ಕೇಳಿದಿರಿ. ನಿಮ್ಮಮೇಲಾದ ಅವುಗಳ ಪರಿಣಾಮವನ್ನು ನಾನರಿಯೆ. ನಾನೂ ಕೇಳಿದೆನು. ಅವು ಗಳಲ್ಲಿ ಒಂದು ಮಾತಿನಲ್ಲಾದರೂ ನಿಜವಿಲ್ಲ. ಆದರೂ ನನ್ನ ವಿಷಯ ವಾಗಿ ಅವರು ಬಹು ಚಾತುರ್ಯದಿಂದ ಹೇಳಿದುದನ್ನು ಕೇಳಿ ನನಗೇ ಭ್ರಾಂತಿಯುಂಟಾಯಿತು. ನಾನು “ ಮಾತನಾಡುವುದರಲ್ಲಿ ಬಹಳ ಚತುರನು. ನೀವು ಮೋಸಹೋಗಬಾರದು. ಜಾಗರೂಕರಾಗಿರ ಬೇಕು.” ಎಂದು ಹೇಳಿದರಲ್ಲ. ಅದೇ ಅವರು ಆಡಿದ ಸುಳ್ಳುಗಳಲ್ಲಿ ದೊಡ್ಡ ಸುಳ್ಳು. ನಾನು ಬಾಯಿತೆರೆದ ಕೂಡಲೆ ನೀವೇ ನಿಜವನ್ನು ತಿಳಿದುಕೊಳ್ಳುವಿರಿ. ಜನಗಳನ್ನು ವಶಮಾಡಿಕೊಳ್ಳುವ ಮಾತಿನಶಕ್ತಿ ಯು ನನ್ನಲ್ಲಿಲ್ಲ. ಇಂತಹ ದೊಡ್ಡ ಸುಳ್ಳನ್ನು ನಾಚಿಕೆಯಿಲ್ಲದೆ ನಿಮ್ಮ ಮುಂದೆ ವಾದಿಗಳು ಹೇಳಿದರಲ್ಲಾ ಎಂದು ನನಗೆ ಆಶ್ಚರ್ಯವಾಗುತ್ತದೆ.

ಆದರೆ ಸುಳ್ಳನ್ನುಳಿದು ನಿಜವನ್ನು ಮಾತ್ರ ಹೇಳುವುದೇ ಸದ್ವ್ಯಾಖ್ಯಾನದ ಲಕ್ಷಣವಾದುದರಿಂದ ನಾನು ವಾಕ್ಚತುರನೆಂದು ಒಪ್ಪಿಕೊಳ್ಳುತ್ತೇನೆ. ಅವರ ವ್ಯಾಖ್ಯಾನಗಳಲ್ಲಿ ನಿಜವನ್ನು ಕಾಣುವುದೇ ಅಪೂರ್ವ. ನಾನು ನಿಜವೆಲ್ಲವನ್ನೂ ನಿಮಗೆ ಹೇಳಬಯಸುವೆನು. ಸೊಗಸಾದ ಪದಗಳನ್ನು ಸೇರಿಸಿ, ಅಲಂಕಾರಗಳನ್ನು ಕಟ್ಟಿ ವ್ಯಾಖ್ಯಾನವನ್ನು ಬೆಳೆಸಲು ನಾನು ಯೋಚಿಸಿಕೊಂಡು ಬಂದಿಲ್ಲ. ನನ್ನ ಪಕ್ಷಕ್ಕೆ ಧರ್ಮವೂ ನ್ಯಾಯವೂ ಇರುವುದೆಂದು ನಂಬಿರುವುದರಿಂದ ನಾನು ಸುಂದರವಾದ ಪದಗಳನ್ನು ಜೋಡಿಸುವ ಪ್ರಯತ್ನವನ್ನು ಮಾಡುವುದಿಲ್ಲ. ನನ್ನ ಮನಸ್ಸೂ ಮಾತೂ ಒಂದಾಗಿರುವಾಗ ನನಗೆ ತೋರಿದಂತೆ ಆಡಿಬಿಡುತ್ತೇನೆ. ಗೆಳೆಯರೇ! ವಯೋವೃದ್ಧನಾದ ನಾನು ಸುಳ್ಳನ್ನು ಕಟ್ಟಿ ನಿಮ್ಮೆದುರಿನಲ್ಲಿ ಹುಡುಗನಂತೆ ಮಾತನಾಡಬಾರದು. ನಿಮ್ಮನ್ನು ಒಂದುಮಾತ್ರ ಕೇಳಿಕೊಳ್ಳುವೆನು. ಅಂಗಡಿಬೀದಿಯಲ್ಲಿಯೂ ಸಂತೆಕೂಟಗಳಲ್ಲಿಯೂ ಮತ್ತೆ ಇತರ ಸ್ಥಳಗಳಲ್ಲಿಯೂ ನಾನು ಯಾವರೀತಿ ಮಾತನಾಡುತ್ತ ಬಂದಿರುವೆನೋ ನೀವೂ ಯಾವರೀತಿ ಕೇಳುತ್ತಾ ಬಂದಿರುವಿರೋ ಅದೇ ರೀತಿ ವಾಕ್ಯಾಲಂಕಾರಗಳಿಲ್ಲದಂತೆ ಇಲ್ಲಿಯೂ ನಿಮ್ಮ ಮುಂದೆ ಮಾತನಾಡುತ್ತೇನೆ. ಈರೀತಿ ಮಾತನಾಡುವುದನ್ನು ಕಂಡು ನ್ಯಾಯಸ್ಥಾನದಲ್ಲಿ ಆಚರಿಸಬೇಕಾದ ಕ್ರಮವನ್ನು ನಾನು ತಪ್ಪಿದೆನೆಂದು ನೀವು ಕೋಪಿಸಿಕೊಳ್ಳಬೇಡಿ. ನಾನು ಹೇಳಬೇಕೆಂದಿರುವುದನ್ನು ಅಡ್ಡಮಾತಾಡಿಸದೆ, ಶಾಂತಿಯಿಂದ ಕೇಳುವಂತೆ ನಿಮ್ಮನ್ನು ಬೇಡುತ್ತೇನೆ. ನನಗೆ ಎಪ್ಪತ್ತುವರ್ಷಕ್ಕೆ ಮೇಲಾಯಿತು. ನ್ಯಾಯಸ್ಥಾನಕ್ಕೆ ನಾನು ಬಂದುದು ಇದೇ ಮೊದಲನೆಯ ಸಲ. ಈ ಸ್ಥಳದಲ್ಲಿ ಮಾತನಾಡುವ ವಿಧಾನವನ್ನು ನಾನರಿಯೆ. ನಾನು ಅನ್ಯದೇಶದಿಂದ ಬಂದಿದ್ದರೆ, ಅನ್ಯಭಾಷೆಯಲ್ಲಿ ಅನ್ಯರೀತಿಯಲ್ಲಿ ಮಾತನಾಡಲು ಹೇಗೆ ಅನುಮತಿಯನ್ನು ಕೊಡುತ್ತಿದ್ದಿರೋ ಹಾಗೆಯೇ ನನ್ನನ್ನು ಮನ್ನಿಸಿ, ನನ್ನ ಮಾತಿನಲ್ಲಿರುವ ಕ್ರಮಭಂಗಗಳನ್ನು ಗಣಿಸದೆ, ವಿಷಯವನ್ನು ಮಾತ್ರ ಗ್ರಹಿಸಿ, ಏಕಾಗ್ರಚಿತ್ತರಾಗಿ ವಿಚಾರಮಾಡಬೇಕೆಂದು ನಾನು ಹಾರೈಸುತ್ತೇನೆ. ಸುಳ್ಳನ್ನು ದೂರ

ಮಾಡಿ ನಿಜವನ್ನೇ ಹೇಳುವುದು ಹೇಗೆ ಸದ್ವ್ಯಾಖ್ಯಾನದ ಲಕ್ಷಣವೋ ಹಾಗೆಯೇ ವಾದಿಪ್ರತಿವಾದಿಗಳು ಹೇಳುವುದು ನ್ಯಾಯುವೇ ಅಲ್ಲವೇ ಎನ್ನುವುದನ್ನು ಮಾತ್ರ ಲಕ್ಷ್ಯಗಲ್ಲಿಡುವುದು ನ್ಯಾಯಾಧಿಪತಿಯ ಉತ್ತಮ ಲಕ್ಷಣ.

ಅಥೆನ್ಸಿನ ಪುರನಿವಾಸಿಗಳೆ! ನನ್ನ ಮೇಲೆ ದೋಷವನ್ನು ಆರೋಪಿಸುವುದು ಇದೇ ಮೊದಲೆಂದು ತಿಳಿಯಬೇಡಿ. ಈಗ ನನ್ನ ಮೇಲೆ ಹೊರಿಸಿರುವ ಆರೋಪಣೆಗಳನ್ನು ಇದಕ್ಕೆ ಮೊದಲೇ ಅನೇಕ ವರ್ಷಗಳಿಂದ ನನ್ನ ಮೇಲೆ ಕೆಲವರು ಹೊರಿಸುತ್ತಾ ಬಂದಿರುವರು. ಅವರು ನನ್ನ ಮೇಲೆ ಹೊರಿಸುತ್ತಾ ಬಂದ ದೋಷಗಳು ನಿಮ್ಮ ಮನಸ್ಸನ್ನು ಕೆಡಿಸಿಯೇ ಇವೆ. ಅವುಗಳಿಂದ ನಾನು ತಪ್ಪಿಸಿಕೊಳ್ಳುವುದು ಕಷ್ಟ. ಈಗ ನನ್ನ ಮೇಲೆ ಆರೋಪಿಸಿರುವ ಅಪರಾಧಗಳು ದೊಡ್ಡವಾದರೂ ಇದಕ್ಕೆ ಮೊದಲೇ ಹೊರಿಸಿದ್ದ ತಪ್ಪಿತಗಳು ಇನ್ನೂ ದೊಡ್ಡವೆಂದು ನನ್ನ ಭಾವನೆ ಸಭಿಕರಾದ ನೀವೆಲ್ಲರೂ ಚಿಕ್ಕಹುಡುಗರಾಗಿದ್ದಾಗಿನಿಂದಲೂ ನಿಮ್ಮ ಮನಸ್ಸನ್ನು ಕೆಡಿಸುವಂತಹ ದೋಷಾರೋಪಣೆಗಳನ್ನು ಮಾಡುತ್ತಲೇ ಬಂದಿರುವರು. ಚಿಕ್ಕ ವಯಸ್ಸಿನಲ್ಲಿ ಒಂದು ಅಭಿಪ್ರಾಯವು ಮನಸ್ಸಿನಲ್ಲಿ ನಾಟಿದರೆ ಅದರಿಂದ ಬಿಡುಗಡೆ ಹೊಂದುವುದು ಕಷ್ಟ. "ಸೋಕ್ರಟೀಸ್ ಎಂಬುವನು ಭೂಮಿ, ಪಾತಾಳ, ಆಕಾಶವೆನ್ನುವ ಪ್ರತಿ ಲೋಕದಲ್ಲಿಯೂ ಇರುವ ತತ್ವಗಳೆಲ್ಲವನ್ನೂ ಜಿಜ್ಞಾಸಮಾಡುವವನು. ಬಹಳ ಯುಕ್ತಿವಂತನು. ಸುಳ್ಳನ್ನು ನಿಜವೆನಿಸಿಯೂ, ನಿಜವನ್ನು ಸುಳ್ಳೆನಿಸಿಯೂ ಮೋಸಗೊಳಿಸುವ ಶಕ್ತಿಯುಳ್ಳವನು" ಎಂಬೊಂದು ಆರೋಪಣೆಯು ನನ್ನ ಮೇಲೆ ಅನೇಕ ವರ್ಷಗಳಿಂದ ಇದ್ದೇ ಇರುವುದು. ಆಕಾಶದಲ್ಲಿಯೂ ಭೂಮಿಯಲ್ಲಿಯೂ ಇರುವ ಭೌತಿಕ ತತ್ವಗಳನ್ನು ಜಿಜ್ಞಾಸಮಾಡುವವರೆಲ್ಲರೂ ನಾಸ್ತಿಕರೆಂದು ಜನಗಳು ಸಾಮಾನ್ಯವಾಗಿ ಎಣಿಸುತ್ತಾರೆ. ನನ್ನ ಮೇಲೆ ಹೊರಿಸಿರುವ ಇಂತಹ ದೊಡ್ಡದೋಷಗಳಿಂದ ನಾನೊಬ್ಬ ದುರಾತ್ಮನೆಂದು ನೀವು

ನಿಶ್ಚಯಿಸಿರುವಿರಿ. ಮೇಲೀಟಸ್ ಆಗಲಿ, ಅನೀಟಸ್ ಆಗಲಿ ದೊಡ್ಡ ವೈರಿಗಳೆಂದು ನಾನು ಎಣಿಸುವುದಿಲ್ಲ. ಆದರೆ ಹಳೆಯ ದೋಷಗಳನ್ನು ಹರಡಿರುವವರೇ ನನ್ನ ದೊಡ್ಡ ಶತ್ರುಗಳು. ಅವರು ಒಬ್ಬಿಬ್ಬರಲ್ಲ, ಅನೇಕರಿರುವರು. ಅವರು ಅನೇಕ ವರ್ಷಗಳಿಂದ ನನ್ನನ್ನು ದೂರುವುದುಮಾತ್ರವಲ್ಲದೆ ಹೇಳುವುದೆಲ್ಲವನ್ನು ಸತ್ಯವೆಂದು ನಂಬುವ ಬಾಲ್ಯಾವಸ್ಥೆಯಲ್ಲಿದ್ದ ನಿಮ್ಮ ಮನಸ್ಸನ್ನು ಕೆಡಿಸಿರುವರು. ಮತ್ತೂ ಅವರ ದೂರುಗಳಿಗೆ ಪ್ರತಿಯಾಗಿ ಮಾತನಾಡುವವರೇ ಇಲ್ಲ. ಅವರು ಒಂದು ಕಕ್ಷಿಯನ್ನು ಕಟ್ಟಿಕೊಂಡು ನನ್ನಮೇಲೆ ಛಲವನ್ನು ಸಾಧಿಸಿರುವರು ಈ ಕಾರಣಗಳಿಂದಲೇ ಈ ಹಳೆಯ ಆರೋಪಣೆಗಳ ಪರಿಣಾಮವನ್ನು ಕುರಿತು ನನಗೆ ಬಹಳ ಭೀತಿಯುಂಟು. ಅವುಗಳ ವಿಚಾರದಲ್ಲಿ ಮೊದಲು ಕೆಲವು ಮಾತುಗಳನ್ನು ಹೇಳಬಯಸುವೆನು. ಕೆಲವು ನಾಟಕಗಳು ನನ್ನನ್ನು ಈರೀತಿ ಅವಹೇಳನ ಮಾಡಿರುವವು೧ ಅಲ್ಲದೆ ಅನೇಕರು ನಿಜಾಂಶವನ್ನು ತಿಳಿಯದೆ ಇದೇ ರೀತಿ ಸುಳ್ಳನ್ನು ಹಬ್ಬಿಸಿರುವರು. ಕೆಲವರು ನಿಜವಾಗಿಯೂ ನಾನು ನಾಸ್ತಿಕನೆಂದೂ, ನೀತಿನಡತೆಗಳನ್ನು ಕೆಡಿಸುವವನೆಂದೂ ನೆನೆದು ಈರೀತಿ ನನ್ನ ವಿಚಾರದಲ್ಲಿ ಹೇಳಿರುವರು. ಆದರೆ ಮುಖ್ಯವಾಗಿ ಇದಕ್ಕೆ ಕಾರಣ ನನ್ನಮೇಲೆ ಕೆಲವರು ಸಾಧಿಸಿರುವ ಮತ್ಸರ ಮತ್ತು ದ್ವೇಷ. ಈ ಮೊಕದ್ದಮೆಯಲ್ಲಿ ನಾನು ಅವರೆಲ್ಲರನ್ನೂ ನಿಮ್ಮ ಮುಂದೆ ನಿಲ್ಲಿಸಿ, ಪ್ರಶ್ನೆಮಾಡಿ, ಅವರು ಹೇಳಿರುವುದು ಸುಳ್ಳೆಂದು ಅವರ ಬಾಯಿಂದಲೇ ತೋರಿಸುವುದಕ್ಕೆ ಸಾಧ್ಯವಿಲ್ಲ. ನೆರಳಿನೊಡನೆಯೂ ಕಣ್ಣಿಗೆ ಕಾಣದವರೊಡನೆಯೂ ಯುದ್ಧಮಾಡುವುದು ಕಷ್ಟ.

ಆದರೂ, ಅಥೆನ್ಸಿನ ಮಹಾಜನರೇ! ನನಗೆ ಕೊಟ್ಟಿರುವ ಸ್ವಲ್ಪ ಅವಧಿಯಲ್ಲಿ ನಾನು ಹೇಳಬೇಕೆಂದಿರುವುದನ್ನು ಹೇಳಿ ನನ್ನ ವಿಷಯದಲ್ಲಿ ಬಹುಕಾಲದಿಂದ ನಿಮ್ಮ ಮನಸ್ಸಿನಲ್ಲಿರುವ ದುರಭಿ

---

೧ ಅರಿಸ್ಟೋಫಾನಿಸ್ ಬರೆದ ನಾಟಕ. ೫ನೆಯ ಪುಟವನ್ನು ನೋಡಿ.

ಪ್ರಾಯಗಳನ್ನು ತಿದ್ದಲು ಯತ್ನಿಸುವೆನು. ಇದು ಕಷ್ಟವಾದ ಕೆಲಸ ವೆಂದು ನನಗೆ ತಿಳಿಯದೆ ಇಲ್ಲ. ನನ್ನ ಮಾತುಗಳು ನಿಮ್ಮ ಮನಸ್ಸನ್ನು ಹೊಕ್ಕು, ನೀವು ನನ್ನನ್ನು ನಿರಪರಾಧಿಯೆಂದು ತೀರ್ಮಾನಿಸುದಾದರೆ ದೇವರ ಇಚ್ಛೆ. ಪರಿಣಾಮವನ್ನು ಕರುಣಾಮಯನಾದ ಭಗವಂತನಿಗೆ ಒಪ್ಪಿಸಿ, ನಾನು ಹೇಳಬೇಕೆಂದಿರುವುದನ್ನು ಕ್ರಮವಾಗಿ ಹೇಳುವೆನು.

ಯಾವ ಧೈರ್ಯವನ್ನು ತಾಳಿ ಮೇಲೇಟಸ್ಸನು ನನ್ನಮೇಲೆ ಈ ವ್ಯವಹಾರವನ್ನು ತಂದಿರುವನೋ, ಜನಗಳ ಮನಸ್ಸು ಕೆಡುವಂತೆ ನನ್ನ ವಿರೋಧಿಗಳು ಬಹುದಿನಗಳಿಂದ ಯಾವ ದೋಷವನ್ನು ನನ್ನ ಮೇಲೆ ಹೊರಿಸುತ್ತಿರುವರೋ ಅದನ್ನು ವಿಚಾರ ಮಾಡಿನೋಡುವ. ಆ ದೋಷವನ್ನು ನ್ಯಾಯಸ್ಥಾನದಲ್ಲಿ ತಂದಿರುವ ಒಂದು ವ್ಯವಹಾರ ವೆಂದೇ ಭಾವಿಸಿ ಪರಿಶೋಧಿಸುವ. ಅವರು ಆರೋಪಿಸುವ ಅಪರಾಧವೇನೆಂದರೆ: "ಸೋಕ್ರಟೀಸನು ಒಬ್ಬ ದುರಾತ್ಮನು. ಭೂಮಿಯಲ್ಲಿಯೂ ಆಕಾಶದಲ್ಲಿಯೂ ನಡೆಯುವ ವಿಷಯಗಳನ್ನು ಶೋಧಿಸುವ ಅಧಿಕಪ್ರಸಂಗಿ. ತನ್ನ ಕುತರ್ಕದಿಂದ ಸುಳ್ಳನ್ನು ನಿಜವೆನಿಸಿಯೂ ನಿಜವನ್ನು ಸುಳ್ಳೆನಿಸಿಯೂ ಸಾಧಿಸುವನು. ಇತರರಿಗೂ ಈ ದುರಾಚಾರವನ್ನು ಬೋಧಿಸುವನು." ಇದು ತಾನೇ ನನ್ನ ಮೇಲೆ ಬಹುದಿನಗಳಿಂದ ಹೊರೆಸಿಬಂದ ಅಪರಾಧ. ಅರಿಸ್ಟೊಫಾನಿಸ್ಸನ ನಾಟಕವನ್ನು ನೀವು ನೋಡಿರುವಿರಿ. ಅದರಲ್ಲಿ ಸೋಕ್ರಟೀಸನೆನ್ನುವನೊಬ್ಬನು ಗೂಡೆಯಲ್ಲಿ ಕುಳಿತು ಸುತ್ತಿಸುತ್ತಿಬಂದು, ತಾನು ವಾಯುಸ್ತಂಭನಮಾಡಿದವನೆಂದೂ ಇನ್ನೂ ಅನೇಕ ರೀತಿಯಾಗಿ ಅರ್ಥವಿಲ್ಲದೆ ಮಾತನಾಡುವುದನ್ನೂ ನೋಡಿರುವಿರಿ. ಆ ಸೋಕ್ರಟೀಸನ ಮಾತುಗಳೂ, ಕಾರ್ಯಗಳೂ, ನಿಜವಾದ ಸೋಕ್ರಟೀಸನಾದ ನನಗೆ ಒಂದೂ ತಿಳಿಯದು. ವಾಯುಸ್ತಂಭನವೂ ಮತ್ತು ವಿನೋದವಾದ ಭೌತಿಕತತ್ವಗಳ ಸಾಧನೆಗಳೂ ಕೂಡದೆಂದು ನಾನು ಹೇಳಲಿಲ್ಲ. ಅವನ್ನು ಕಲಿತವರು ಉತ್ತಮರಾಗಿರಬಹುದು. ಆದರೆ ಅವುಗಳಿಗೂ ನನಗೂ ಯಾವ ಸಂಬಂಧವೂ ಇಲ್ಲ. ನಾನು ಅವು

ಗಳನ್ನು ಕಲಿತವನಲ್ಲವೆಂದೇ ಹೇಳುತ್ತೇನೆ. ಇದರ ನಿಜಾಂಶವು ನಿಮಗೆ ಗೊತ್ತೇ ಇದೆ. ನೀವೆಲ್ಲರೂ ನನ್ನ ಸಾಕ್ಷಿಗಳು. ನಾನು ಅನೇಕ ವರ್ಷಗಳಿಂದ ಮಾತನಾಡುತ್ತಿರುವುದನ್ನು ನಿಮ್ಮಲ್ಲಿ ಅನೇಕರು ಕೇಳಿರುವಿರಿ. ಒಮ್ಮೆಯಾದರೂ ಈ ವಿಷಯಗಳನ್ನು ಕುರಿತು ನಾನು ಮಾತನಾಡಿದುದು ಉಂಟೇ ಇಲ್ಲವೆ ಎನ್ನುವುದನ್ನು ನನ್ನನ್ನು ಬಲ್ಲವರಾದ ನೀವು ನೆನಪಿಗೆ ತಂದುಕೊಂಡು ನಿಮ್ಮಲ್ಲಿ ನನ್ನೊಡನೆ ಸಂಭಾಷಣೆಯನ್ನು ಮಾಡದಿರುವವರಿಗೆ ಹೇಳಬೇಕೆಂದು ಕೋರುತ್ತೇನೆ. ಆದುದರಿಂದ ಆಧಾರವಿಲ್ಲದೆ ನನ್ನಮೇಲೆ ಇತರ ದೋಷಗಳನ್ನು ಹೇಗೆ ಹೊರಿಸಿರುವರೆಂದು ನೀವು ತಿಳಿದುಕೊಳ್ಳಬಹುದು.

ನಾನು ಯುವಕರಿಗೆ ವಿದ್ಯಾಭ್ಯಾಸಮಾಡಿಸಿ ಅದರಿಂದ ದ್ರವ್ಯಾರ್ಜನೆಯನ್ನು ಮಾಡಿದೆನೆಂದು ಯಾರಾದರೂ ಹೇಳಿದರೆ ಅದೂ ಶುದ್ಧ ಸುಳ್ಳೆಂದು ನೀವು ತಿಳಿಯಬೇಕು. ಯುವಕರಿಗೆ ವಿದ್ಯಾಭ್ಯಾಸ ಮಾಡಿಸುವುದು ಉತ್ತಮವಾದ ವೃತ್ತಿ. ಅದಕ್ಕೆ ಅರ್ಹರಾದ ಕೆಲವರು ಮೇಧಾವಿಗಳು ಇರುವರೆಂದು ನನಗೆ ಗೊತ್ತುಂಟು. ಕುದುರೆಯ ಮರಿಯನ್ನೂ ಹೋರಿಯನ್ನೂ ಓಡಿಸಿ, ನಿಲ್ಲಿಸಿ, ಪರೀಕ್ಷಿಸುವ, ಕುದುರೆ ಕಾಯುವವರೂ ದನಕಾಯುವವರೂ ಸುಲಭವಾಗಿ ಸಿಕ್ಕುತ್ತಾರೆ. ಆದರೆ ಮನುಷ್ಯನ ಕರ್ತವ್ಯಗಳನ್ನೂ, ದೇಶವನ್ನಾಳುವ ನಾಗರಿಕ ಧರ್ಮಗಳನ್ನೂ, ನೀತಿಗೆ ವಿರುದ್ಧವಾಗದಂತೆ ನಡೆಯುವ ಯೋಗ್ಯತೆಯನ್ನೂ, ಶೀಲವನ್ನೂ ಯುವಕರಿಗೆ ಕಲಿಸಿ, ಅವರನ್ನು ಸನ್ಮಾರ್ಗದಲ್ಲಿ ನಿಲ್ಲಿಸಿ, ಆಳಬಲ್ಲ ಮೇಧಾವಿಗಳನ್ನಾಗಿ ಮಾಡುವುದು ಕಷ್ಟ. ನನಗೆ ಅಂತಹ ಯೋಗ್ಯತೆಇದ್ದರೆ ನಾನು ಅದನ್ನು ಮರೆಮಾಚಿ ಇಡುತ್ತಿರಲಿಲ್ಲ. ಅದನ್ನು ಹೊರಪಡಿಸಿಯೇ ಇರುತ್ತಿದ್ದೆ. ಬಹಳ ಹೆಮ್ಮೆಯನ್ನೂ ಜಂಭವನ್ನೂ ತಾಳುತ್ತಿದ್ದೆ. ಆದರೆ ಮಹಾಜನರೇ! ನನ್ನಲ್ಲಿ ಅಂತಹ ಯೋಗ್ಯತೆ ಇಲ್ಲವೆನ್ನುವುದು ದಿಟ.

ನೀವು ಒಂದುವೇಳೆ ನನ್ನನ್ನು ಈ ರೀತಿ ಕೇಳಬಹುದು: "ಸೋಕ್ರಟೀಸನೇ ನೀನು ಹೇಳುವುದು ಸರಿ. ಆದರೆ ನೀನು

ಮಾಡುತ್ತಿರುವುದೇನು? ಏತಕ್ಕೆ ನಿನ್ನಮೇಲೆ ವೃಥಾ ಅಪರಾಧ ಹೊರಿಸುವರು? ನೀನು ಯಾವುದನ್ನೋ ಮಾಡುತ್ತಾ ಬಂದಿರುವುದು ಜನಗಳಿಗೆ ಹೊಂದದೇ ಹೋಗಿರುವದರಿಂದಲ್ಲವೇ ಈ ವಿಧವಾದ ದೋಷಗಳು ಮೊಳೆತಿರಬೇಕು. ಇತರರಂತೆ ಸಾಧಾರಣ ವೃತ್ತಿಯಲ್ಲಿ ನೀನೂ ಇದ್ದಿದ್ದರೆ ಈ ರೀತಿಯಲ್ಲಿ ಜನಗಳು ವೃಥಾ ನಿನ್ನಮೇಲೆ ಆರೋಪಣೆಗಳನ್ನು ಮಾಡುತ್ತಿರಲಿಲ್ಲ. ಆದುದರಿಂದ ನೀನೇ ನಿಜವನ್ನು ಹೇಳು. ನಿನ್ನ ಆಚರಣೆಗಳನ್ನು ನೀನೇ ಹೇಳಿ ವ್ಯಕ್ತಪಡಿಸಿದರೆ ನಾವು ತೀರ್ಮಾನಿಸುವುದಕ್ಕಾಗುವುದು.'' ಹೀಗೆ ನೀವು ಕೇಳುವುದು ನ್ಯಾಯವೇ. ನಾನು ಯಾವ ರೀತಿ ಆಚರಿಸಿದೆನೆಂದೂ, ಏತಕ್ಕೆ ನನ್ನ ಮೇಲೆ ಇಷ್ಟು ಜನರಿಗೆ ಅಸೂಯೆ ಹುಟ್ಟಿದೆಯೆಂದೂ ಹೇಳುವೆನು, ಕೇಳಿ. ಒಂದೇ ಮಾತಿನಲ್ಲಿ ಮುಗಿಸಬೇಕಾದರೆ, ನಾನು ದೇವರಿಗೆ ಒಪ್ಪುವಂತಹ ಮಾರ್ಗದಲ್ಲಿ ನಡೆದದ್ದೇ ಎಂದು ಹೇಳಬಹುದು. ಅಥೆನ್ಸಿನ ಪುರನಿವಾಸಿಗಳೇ! ಡೆಲ್ಫಿಯ೧ ಮಹಾಸನ್ನಿಧಿಯಲ್ಲಿ ದೈವಕೃಪೆಯಿಂದ ಒಂದು ವಾಣಿಯು ಅನುಗ್ರಹವಾಯಿತು. ಅಲ್ಲಿಗೆ ನಾನೇನೂ ಹೋಗಿ ಕೇಳಲಿಲ್ಲ. ನನ್ನ ಮಿತ್ರನಾದ ಚೇರಫಾನ್ ಎನ್ನುವ ಮಹನೀಯನು ನಿಮಗೆ ಪರಿಚಿತನಾಗಿಯೇ ಇರುವನು. ನಮ್ಮ ನಗರದ ಆಡಳಿತದಲ್ಲಿ ದುರವಸ್ಥೆಯು ತಲೆದೋರಿದಾಗ ಈತನು ಈ ಅವ್ಯವಸ್ಥೆಯನ್ನು ಕಂಡು ಸಹಿಸಲಾರದೆ ನಗರವನ್ನೇ ಬಿಟ್ಟು

---

೧. ಜೀವಾಧಾರನೂ ಹರ್ಷದಾಯಕನೂ ಆದ ಸೂರ್ಯದೇವನನ್ನು ಅಪ್ಪೋಲೋ ಎಂಬ ಹೆಸರಿನಿಂದ ಗ್ರೀಕರು ಬಹು ಭಕ್ತಿಯಿಂದ ಪೂಜಿಸುತ್ತಿದ್ದರು. ಈ ದೇವರಿಗೆ ಡೆಲ್ಫಿ ಎಂಬ ಊರಲ್ಲಿ ಪ್ರಸಿದ್ಧವಾದ ಒಂದು ಪುರಾತನ ದೇವಸ್ಥಾನವಿದ್ದಿತು. ಇಲ್ಲಿನ ಅರ್ಚಕರು ಬಹಳ ಪ್ರಬಲರು. ಈ ಗುಡಿಯ ವಿಶೇಷವೇನೆಂದರೆ ಹೋದ ಭಕ್ತಾದಿಗಳಿಗೆ ತಮ್ಮ ಮನಸ್ಸಿನಲ್ಲಿ ಚಿಂತಿಸಿಕೊಂಡಿರುವ ಸಮಸ್ಯೆಗಳನ್ನು ಬಿಡಿಸುವಂತಹ ಉತ್ತರವನ್ನು ಒಂದು ಅಶರೀರವಾಣಿ ನುಡಿಯುವುದು. ಇದು ಅರ್ಚಕರು ಮಾಡುತ್ತಿದ್ದ ಒಂದು ತಂತ್ರವೆಂದು ಪರಿಶೋಧಕರು ಹೇಳುವುದುಂಟು. ಆದರೆ ಇದರ 'ಸತ್ಯ' ದ ವಿಚಾರದಲ್ಲಿ ಗ್ರೀಕರಿಗೆ ಬಹಳ ಶ್ರದ್ಧಾಭಕ್ತಿಗಳಿದ್ದುವು.

ಹೋದನು. ಮತ್ತೆ ಸ್ಥಿತಿಗತಿಗಳು ಸುಧಾರಿಸಿದಮೇಲೆ ಹಿಂತಿರುಗಿ ಬಂದನು. ಆತನು ಡೆಲ್ಫಿಯ ಸ್ವಾಮಿಸನ್ನಿಧಿಯಲ್ಲಿ, ಹೋಗಿ ಕೇಳಿದ ಪ್ರಶ್ನೆಗೆ ಅರ್ಚಕರ ಮುಖಾಂತರ "ಸೋಕ್ರಟೀಸಿನಿಗಿಂತಲೂ ಯಾರೂ ಜ್ಞಾನಿಯಿಲ್ಲ" ಎಂದು ದೈವಾನುಗ್ರಹವಾಯಿತು.

ಇದನ್ನು ನಾನು ತಿಳಿದುಕೊಂಡವನಾಗಿ, "ಇದೇನು ವಿಪರೀತ! ಅಜ್ಞಾನಿಯಾದ ನನ್ನನ್ನು ಕುರಿತು ದೇವರು ಈ ರೀತಿ ಅನುಗ್ರಹಿಸಿದುದಕ್ಕೆ ಕಾರಣವೇನು?" ಎಂದು ಆಶ್ಚರ್ಯಗೊಂಡು, ಆದರೂ ಡೆಲ್ಫಿಯ ಗುಡಿಯಲ್ಲಿ ಹೇಳಿದ ಮಾತು ಸುಳ್ಳಾಗಿರದೆಂದು ಚಿಂತಿಸಿದೆನು. ಅನಂತರ ಇದರ ನಿಜವನ್ನು ತಿಳಿದುಕೊಳ್ಳಬೇಕೆಂದು ನನಗಿಂತಲೂ ಬಲ್ಲವರನ್ನೂ, ಜ್ಞಾನಿಗಳನ್ನೂ, ತತ್ವಜ್ಞರನ್ನೂ, ಕವಿಗಳನ್ನೂ, ಧರ್ಮಶಾಸ್ತ್ರಜ್ಞರನ್ನೂ ಇಂತಹವರಲ್ಲಿ ಕೆಲವರನ್ನು ಕಂಡು ಸಂಭಾಷಿಸಿದೆನು. ಡೆಲ್ಫಿ ಸನ್ನಿಧಿಯ ಹೇಳಿಕೆಯನ್ನು ಪರೀಕ್ಷಿಸಿ ನೋಡಿದೆನು. ನನಗೇ ಬಹಳ ಆಶ್ಚರ್ಯವಾಯಿತು.

ನಾನು ಯಾರನ್ನು ದೊಡ್ಡ ಜ್ಞಾನಿಗಳೆಂದು ಇದಕ್ಕೆ ಮೊದಲು ಎಣಿಸಿದ್ದೆನೊ ಅವರು ಶುದ್ಧ ಅಜ್ಞಾನಿಗಳೆಂದು ನನಗೆ ತಿಳಿಯಬಂತು.

---

೧. ಅಥೆನ್ಸಿನ ಆಡಳಿತದಲ್ಲಿ ಒಪಳ ಕ್ರಾಂತಿಕಾರಕದ ಬದಲಾವಣೆಗಳಾದವು. ಅಥೆನ್ಸಿಗೆ ಹೊರಗೂ ಒಳಗೂ ಶಾಂತಿ ಇರಲಿಲ್ಲ. ಹೊರಗಿನಿಂದ ಸ್ಪಾರ್ಟಾ ಮತ್ತು ಪಾರಸಿ ದೇಶದವರು ಈ ನಗರದ ಸೊಕ್ಕನ್ನಡಗಿಸಲು ಹೊಂಚು ಹಾಕುತ್ತಿದ್ದರು. ಕೇವಲ ನಿರಂಕುಶವಾದ ಪ್ರಜಾಪ್ರಭುತ್ವವೇ ಇದ್ದುದರಿಂದ ಇದರಲ್ಲಿ ವಿವೇಕ ಸಾಲದೆಂದು ಕೆಲವರ ಅಭಿಪ್ರಾಯ. ಸಾಮಾನ್ಯ ಜನರ ಸರ್ವಾಧಿಕಾರವನ್ನು ತಪ್ಪಿಸುವ ಪ್ರಯತ್ನಗಳು ನಡೆದವು. ಆದರೆ ಸಾಮಾನ್ಯ ಜನರು ಅಷ್ಟು ಸುಲಭವಾಗಿ ಬಿಟ್ಟುಕೊಡಲಿಲ್ಲ. ಅಂತಃಕಲಹಗಳು ಹೆಚ್ಚಿ ಶ್ರೇಷ್ಠರ ಆಡಳಿತವೇ ಒಳ್ಳೆಯದೆಂದು ಹೇಳುವವರು ತಮ್ಮ ಮಾತಿಗೆ ಬೆಲೆಯಿಲ್ಲದೆ ಹೋದುದರಿಂದ ಜುಗುಪ್ಸೆಯಿಂದ ಊರನ್ನು ಬಿಟ್ಟು ದೇಶಾಂತರಕ್ಕೆ ಹೋದರು. ಇಂತಹವರಲ್ಲಿ ಚೇರಫಾನನೊಬ್ಬನು. ಅನಂತರ ಸ್ಪಾರ್ಟಾಜನರೊಡನೆ ಯುದ್ಧದಲ್ಲಿ ಸೋತು (ಕ್ರಿ. ಪೂ. ೪೦೪ರಲ್ಲಿ) ಸಂಧಿಯಾದಕಾಲಕ್ಕೆ ಆಡಳಿತದ ವ್ಯವಸ್ಥೆಯು ಈ ಪಕ್ಷದವರ ಕೈಸೇರಿತು. ಆಗ್ಗೆ ಚೇರಫಾನನು ಮತ್ತು ಇತರರನೇಕರು ಅಥೆನ್ಸ್ ನಗರಕ್ಕೆ ಹಿಂತಿರುಗಿದರು.

ಇದನ್ನು ಕಂಡು ದೇವರು ದಯೆಪಾಲಿಸಿದ ವಾಣಿಯ ನಿಜಾಂಶವು ನನಗೆ ಸ್ಪಷ್ಟವಾಯಿತು. ಅನೇಕರು ಅಜ್ಞಾನದಲ್ಲಿ ಮುಳುಗಿರುವರು. ಆದರೆ ಅವರು ತಮ್ಮ ಅಜ್ಞಾನವನ್ನು ತಿಳಿದುಕೊಳ್ಳದೆ ಮಹಾ ಪಂಡಿತರೆಂದೂ, ಪೂರ್ಣಪ್ರಜ್ಞರೆಂದೂ ಎಣಿಸಿ ಅಜ್ಞಾನದಲ್ಲಿಯೇ ಮುಳುಗಿ ಕಾಲವನ್ನು ಕಳೆಯುವರು. ನಾನು ನನ್ನ ಅಜ್ಞಾನವನ್ನು ಚೆನ್ನಾಗಿ ತಿಳಿದಿರುವೆನಾದುದರಿಂದ ನನ್ನನ್ನು ಜ್ಞಾನಿಯೆಂದು ಡೆಲ್ಫಿಯ ದೇವರು ಗುರ್ತಿಸಿದನೆಂದು ಅರಿತುಕೊಂಡೆನು. ಅದು ಮೊದಲು ಇತರ ಜನಗಳಿಗೂ ಅವರ ಅಜ್ಞಾನವನ್ನು ಚೆನ್ನಾಗಿ ತೋರಿಸಿಕೊಡುವುದೇ ನನ್ನ ಜೀವನದ ಕರ್ತವ್ಯವೆಂದೂ, ಇದೇ ದೇವರು ನನಗೆ ಮಾಡಿರುವ ಆಜ್ಞೆಯೆಂದೂ ಎಣಿಸಿದೆನು. ಹೀಗೆ ಎಣಿಸಿದೆನಾದುದರಿಂದ ಈ ಕೆಲಸದಲ್ಲಿ ಬರುವ ಕಷ್ಟನಿಷ್ಠುರಗಳನ್ನು ಗಣಿಸದೆ ಈ ಕರ್ತವ್ಯವನ್ನು ನೆರವೇರಿಸುತ್ತಿರುವೆನು. ಪ್ರಸಿದ್ಧರಾದ ಪಂಡಿತರನ್ನೂ, ಮೇಲ್ಮೆಹೊಂದಿದ ಕವಿಗಳನ್ನೂ, ರಾಜ್ಯನೀತಿವಿಶಾರದರನ್ನೂ ಒಬ್ಬೊಬ್ಬರನ್ನಾಗಿ ನೋಡಿ ದೇವರು ನನಗೆ ನೇಮಿಸಿರುವ ಕರ್ತವ್ಯವನ್ನು ಮಾಡಿದೆನು. ನಿಜವಾಗಿಯೂ ಅವರಲ್ಲಿ ಜ್ಞಾನವು ಸ್ವಲ್ಪವೂ ಇಲ್ಲವೆನ್ನುವುದನ್ನೂ, ಅಜ್ಞಾನದಲ್ಲಿ ಅವರು ಮುಳುಗಿರುವ ವಿಷಯವನ್ನೂ ವಿಶದಪಡಿಸುತ್ತಾ ಬಂದೆನು. ಎಲ್ಲರನ್ನೂ ನೋಡಿದುದರಲ್ಲಿ ಯಾರು ತಮ್ಮೊಳಗೆ ತಾವೇ ಜ್ಞಾನಿಗಳೆಂದು ಹೆಮ್ಮೆಪಡುತ್ತಿದ್ದರೋ ಅವರು ಕಡುಮೂಢರೆಂದೂ, ಇತರರಿಗಿಂತಲೂ ತಾವು ಬುದ್ಧಿಯಲ್ಲಿ ಹೀನರೆಂದೆಣಿಸುವ ಪಾಮರಜನರೇ ಜ್ಞಾನಸಾಧನೆಗೆ ಅವಕಾಶಕಲ್ಪಿಸಿಕೊಳ್ಳುವ ಅವಸ್ಥೆಯಲ್ಲಿಯಾದರೂ ಇರುವರೆಂದೂ ನನಗೆ ಗೊತ್ತಾಯಿತು. ಕವಿಗಳನ್ನು ನೋಡಿದರೆ ಕಾವ್ಯಗಳನ್ನು ದೈವಕೃಪೆಯಿಂದಲೂ, ಪ್ರತಿಭೆಯಬಲದಿಂದಲೂ ಬರೆದುಬಿಟ್ಟರೇ ಹೊರತು ತಾವು ರಚಿಸಿದ ಗ್ರಂಥದಲ್ಲಿ ಗರ್ಭಿತವಾದ ತತ್ವವನ್ನು ತಾವೇ ತಿಳಿದುಕೊಂಡಿರಲಿಲ್ಲ. ತಾವು ಪ್ರೌಢಕಾವ್ಯಗಳನ್ನು ರಚಿಸಿದ ಕಾರಣದಿಂದ ಲೋಕದಲ್ಲಿರುವ ಸಮಸ್ತ ವಿಷಯಗಳನ್ನೂ ಬಲ್ಲೆವೆಂದು ತಿಳಿದುಕೊಂಡಿದ್ದರು. ಹಾಗೆಯೇ ಇತರ

ಪಂಡಿತರೂ, ಶಾಸ್ತ್ರಜ್ಞರೂ ತಾವು ತಿಳಿದಿರುವ ಒಂದು ವಿಷಯವನ್ನು ಮಾಡಲು ಶಕ್ತಿಯಿರುವ ಒಂದು ಕಾರ್ಯವನ್ನು, ನೋಡಿ, ಹೆಮ್ಮೆಗೊಂಡು, ತಾವು ಸರ್ವಜ್ಞರೆಂದೂ ಸರ್ವಶಕ್ತರೆಂದೂ ತಿಳಿದುಕೊಂಡಿದ್ದರು ಈರೀತಿ ಇವರ ಅಜ್ಞಾನವನ್ನೂ ವಿಚಾರಶೂನ್ಯತೆಯನ್ನೂ ಅವರಿಗೆ ತಿಳಿಯಪಡಿಸಲು ಅವರಿಗೆ ನನ್ನಮೇಲೆ ಕೋಪ ಬಂದು ನನ್ನನ್ನು ದ್ವೇಷದಿಂದ ಕಂಡರು. ನಾನು ಮಾಡುವ ಕೆಲಸವು ಕೇವಲ ದೇವರ ಆಜ್ಞೆಯೆಂದೂ, ನನ್ನ ಚಾತುರ್ಯವನ್ನು ತೋರಿಸಲು ನಾನು ಏನೂ ಮಾಡುತ್ತಿಲ್ಲವೆಂದೂ ಅವರು ತಿಳಿಯಲಿಲ್ಲ. ಅವರು ಯಾವ ವಿಷಯದಲ್ಲಿ ತಾವು ಪೂರ್ಣಪ್ರಜ್ಞರೆಂದು ಎಣಿಸಿಕೊಂಡಿದ್ದರೋ ಆ ವಿಷಯವನ್ನು ಕುರಿತು ಸಂಭಾಷಿಸಿದ್ದರಲ್ಲಿ ಅವರಿಗೆ ಯಾವ ವಿಧವಾದ ಜ್ಞಾನವೂ ಇಲ್ಲವೆಂದು ನಾನು ನಿರೂಪಿಸಿದುದನ್ನು ನೋಡಿ ಸುತ್ತಮುತ್ತಲಿನವರು ನಗುವರು. ಇದನ್ನು ನೋಡಿ ಅವರಿಗೆ ಕೋಪ ಮತ್ತಷ್ಟು ಹೆಚ್ಚುವುದು. ಅಲ್ಲದೆ ನಾನು ಯಾವಯಾವ ವಿಷಯಗಳಲ್ಲಿ ಇತರರಿಗೆ ನಿಜವಾದ ಜ್ಞಾನವಿಲ್ಲವೆಂದು ನಿರೂಪಿಸುತ್ತಾಬಂದೆನೋ ಆ ಜ್ಞಾನವನ್ನು[೧] ನಾನು ಹೊಂದಿರುವೆನೆಂದು ಜನರು ಎಣಿಸಿದರು. ನಿಜವಾಗಿಯೂ ನಾನು ಜ್ಞಾನಿಯಲ್ಲ. ಪೂರ್ಣಜ್ಞಾನವು ಇತರರಲ್ಲಿಯೂ ಇಲ್ಲ. ಆದರೆ ನಾನು ಮೊದಲು ಹೇಳಿದಂತೆ ನನ್ನ ಜ್ಞಾನಹೀನತೆಯನ್ನು ನಾನು ತಿಳಿದಿದ್ದೆನು ಇತರರು ತಿಳಿದಿರಲಿಲ್ಲ. ಇದೇ ನನ್ನಲ್ಲಿರುವ ಮೇಲ್ಮೆ. ಅವರು ತಮ್ಮಲ್ಲಿರುವ ಲೋಪವನ್ನು ತಿಳಿದುಕೊಳ್ಳದೆ ನಾನು ಇತರರನ್ನು ಮೂಢರನ್ನಾಗಿ ಮಾಡುವವನೆಂದೂ ಗರ್ವಿಷ್ಠನೆಂದೂ ಎಣಿಸಿ ನನ್ನನ್ನು ದ್ವೇಷಿಸಿದರು. ಈ ರೀತಿಯಾಗಿ ವಾಕ್ಚತುರರಾದ ಅನೇಕರು ನನ್ನನ್ನು ದ್ವೇಷಿಸಿದ ಮೇಲೆ ನನ್ನ ಜೊತೆಯಲ್ಲಿ ಪಳಗಿದ, ಘನವಂತ ಧನವಂತ ಕುಟುಂಬ

---

೧. ಭೌತಿಕಶಾಸ್ತ್ರಜ್ಞರನ್ನೂ, ಸಾಫಿಸ್ಟರನ್ನೂ 'ಜ್ಞಾನಿ' ಗಳೆಂದು ಕರೆಯುತ್ತಿದ್ದರು.

ಗಳಿಗೆ ಸೇರಿದ ಯುವಕರು ನಾನು ಸಂಭಾಷಿಸಿದ ಕ್ರಮವನ್ನು ನೋಡಿ ತಾವೂ ಕೂಡ ಅದೇ ರೀತಿಯಾಗಿ ತಮ್ಮೊಳಗೇ ಸಂಭಾಷಿಸಿಕೊಳ್ಳಲು ತೊಡಗಿದರು. ಆ ಯುವಕರು ತಾವು ಕಂಡ ಪಂಡಿತರನ್ನು ಪ್ರಶ್ನೆಮಾಡಿ ಆ ಪಂಡಿತರ ಸುಳ್ಳರಿವನ್ನು ವ್ಯಕ್ತಪಡಿಸಿದರು. ಆದುದರಿಂದ ನಾನು ಗರ್ವಿಷ್ಠನಾಗಿ ಕೆಟ್ಟದ್ದಲ್ಲದೇ ಯುವಕರನ್ನೂ ಕೆಡಿಸಿದೆನೆಂದು ಜನರು ನೆನೆದರು. ಈ ರೀತಿಯಾಗಿ ಪಂಡಿತರೆಂದು ಹೆಸರುಳ್ಳವರೂ, ಕವಿಶ್ರೇಷ್ಠರೂ, ಅನೇಕ ಶಾಸ್ತ್ರ ವಿಶಾರದರೂ, ಎಲ್ಲರೂ ನನ್ನಮೇಲೆ ಅಸೂಯೆಯನ್ನು ತಾಳಿ, ದೂರನ್ನು ಹೊರಿಸಿ, ದೂಷಿಸುತ್ತ ಬಂದರು. ಏನು ತಪ್ಪನ್ನು ಸೋಕ್ರಟೀಸನು ಮಾಡಿದನೆಂದು ಕೇಳಿದರೆ ತಮ್ಮ ನಿಜವಾದ ಜ್ಞಾನಹೀನತೆಯನ್ನು ತೋರಿಸಿಕೊಟ್ಟನೆಂದು ಹೇಳಲಾರದೆ, 'ಇವನು ನಾಸ್ತಿಕನು', ಇವನು ಗ್ರೀಕರ ಸನಾತನಧರ್ಮವನ್ನು ಕೆಡಿಸುವವನು, ಸುಳ್ಳನ್ನು ನಿಜಮಾಡುವನು, ನಿಜವನ್ನು ಸುಳ್ಳುಮಾಡುವನು, ಜನಗಳನ್ನು ಭ್ರಾಂತಿಗೊಳಿಸಿ ದುರ್ಬೋಧನೆಗೆ ಅವರನ್ನು ಗುರಿಮಾಡುವನು!' ಎಂದು ದೋಷಾರೋಪಣೆ ಮಾಡುವರು.

ಇವು ಅನೇಕ ವರ್ಷಗಳಿಂದ ನಿಮ್ಮ ಮನಸ್ಸನ್ನು ಕೆಡಿಸಿವೆ. ನನಗೆ ಕೊಟ್ಟಿರುವ ಸ್ವಲ್ಪಕಾಲದಲ್ಲಿ ಇದನ್ನು ಹೇಗೆ ನಿರ್ವಹಿಸುವೆನೋ ಕಾಣೆ. ನಾನು ನಿಜವನ್ನು ಮುಚ್ಚುಮರೆಯಿಲ್ಲದೆ ಹೇಳಿರುವೆನು ಇದು ಈಗ ನಿಮ್ಮ ಮನಸ್ಸಿಗೆ ಹಿಡಿಯದಿದ್ದರೂ ಮುಂದೆಯಾದರೂ ನಿಮಗೆ ತಿಳಿದೇ ತಿಳಿಯುವುದು. ದೇವರು ನನಗೆ ತೋರಿಸಿಕೊಟ್ಟ ಕರ್ತವ್ಯವನ್ನು ಮಾಡುತ್ತ ಬಂದಿರುವೆನು. ಬಂದ ಕಷ್ಟನಿಷ್ಠುರಗಳನ್ನು ಲೆಕ್ಕಿಸದೆ, ಗೃಹಕೃತ್ಯವನ್ನು ಗಮನಿಸದೆ, ಬಹಳ ಮನನೊಂದು ಈ ವಿಧವಾಗಿ ಕಾಲವನ್ನು ಕಳೆಯುತ್ತ ಬಂದಿರುವೆನು.

ಇನ್ನು ನನ್ನಮೇಲೆ ಹಿಂದಿನಿಂದಲೂ ಹೊರಿಸುತ್ತ ಬಂದ ಹಳೆಯ ಆರೋಪಣೆಗಳನ್ನು ಇಷ್ಟಕ್ಕೆ ನಿಲ್ಲಿಸಿ ಈಗ ಹೂಡಿರುವ ವ್ಯವಹಾರವನ್ನು ಗಮನಿಸೋಣ. ವಾದಿಗಳು ಸಾಧಿಸುವ ದೋಷವಾದರೂ

ಏನು ? ' ಸೋಕ್ರಟೀಸನು ಒಬ್ಬ ದುರಾಚಾರಿ. ಅವನು ಸಣ್ಣವರಿಗೆ ದುರ್ಬೋಧನೆ ಮಾಡುವನು; ಜನತೆಯು ಪೂಜಿಸುವ ದೇವತೆಗಳಿಗೆ ಅವನು ಪೂಜೆಯನ್ನು ಮಾಡನು, ಹೊಸ ದೇವತೆಗಳನ್ನು ನಿರ್ಮಾಣ ಮಾಡಿಕೊಂಡಿರುವನು.' ಎಂದು ಅವರು ಹೇಳುವರು. ಇದರಲ್ಲಿ ಒಂದೊಂದು ವಿಷಯವಾಗಿ ತೆಗೆದುಕೊಳ್ಳುವ.

ನಾನು ಚಿಕ್ಕವರ ಬುದ್ಧಿಯನ್ನು ಕೆಡಿಸುತ್ತಿರುವೆನೇ ನೋಡುವ.

"ಅಪ್ಪಾ ! ಮೇಲೇಟಸ್ಸನೇ ! ಇಲ್ಲಿ ಬಾ. ಯುವಕರನ್ನು ನಾನು ಕೆಡಿಸುತ್ತಿರುವೆನಲ್ಲವೇ ?

"ಹೌದು"

"ಸರಿ. ಈ ವಿಷಯದಲ್ಲಿ ಕಳವಳಪಟ್ಟು ಫಿರ್ಯಾದು ಮಾಡಿರುವೆ. ಯುವಕರ ವಿಷಯದಲ್ಲಿ ನಿನಗೆ ಹೆಚ್ಚು ಚಿಂತೆ ಯಲ್ಲವೆ ? ಅವರ ವಿಷಯದಲ್ಲಿ ದೀರ್ಘಾಲೋಚನೆ ಮಾಡಿಯಲ್ಲವೇ ನೀನು ಈ ಫಿರ್ಯಾದನ್ನು ತಂದಿರುವುದು ?

"ಹೌದು"

"ಯುವಕರು ಸರಿಯಾದ ದಾರಿಯಲ್ಲಿ ನಡೆಯುವುದು ರಾಜ್ಯಕ್ಕೆ ಒಳ್ಳೆಯದಲ್ಲವೆ ?"

"ಹೌದು"

"ಯಾರು ಅವರಿಗೆ ತಕ್ಕ ಆಚಾರ್ಯರು ? ದಯವಿಟ್ಟು ಹೇಳು"

(ಮೇಲೇಟಸ್ಸನು ಉತ್ತರವನ್ನು ಕೊಡಲಿಲ್ಲ)

"ಅಪ್ಪಾ ! ಏತಕ್ಕೆ ಸುಮ್ಮನೆ ಬಾಯಿ ಮುಚ್ಚಿಕೊಂಡಿರುವೆ. ಉತ್ತರ ಕೊಡಲಾಗಲಿಲ್ಲವೇ ? ಇದನ್ನು ಕುರಿತು ನೀನು ವಿಚಾರ ಮಾಡಲಿಲ್ಲವೆಂದು ತೋರುತ್ತದೆ. ಯೋಚಿಸದೆ ನನ್ನಮೇಲೆ ದೋಷಾರೋಪಣೆ ಮಾಡುವುದು ಅನ್ಯಾಯವಲ್ಲವೇ ? ನಾಚಿಕೆಗೇಡ

ಲ್ಲವೇ? ದಯವಿಟ್ಟು ಉತ್ತರ ಕೊಡಬೇಕು. ಯಾರು ನಮ್ಮ ಯುವಕರನ್ನು ಒಳ್ಳೆಯ ಪ್ರಜೆಗಳನ್ನಾಗಿ ಮಾಡಲು ಶಕ್ತರು?"

"ದೇಶದ ಕಾನೂನುಗಳು."

"ಗೆಳೆಯನೇ! ಅದನ್ನು ನಾನು ಕೇಳಲಿಲ್ಲ. ಕಾನೂನನ್ನು ಬಲ್ಲ ನಮ್ಮ ಯುವಕರನ್ನು ಯಾರು ಒಳ್ಳೆಯ ನಡತೆಯಲ್ಲಿ ಇರುವಂತೆ ಮಾಡುವವರು? ಅದನ್ನು ಹೇಳಬೇಕು."

"ನ್ಯಾಯಾಧೀಶರೇ!"

"ನೀನು ಹೇಳುವುದೇನು! ನ್ಯಾಯಾಧೀಶರು ನಮ್ಮ ಯುವಕರಿಗೆ ವಿದ್ಯಾಭ್ಯಾಸಮಾಡಿಸಿ, ಅವರನ್ನು ಸದಾಚಾರಶೀಲರನ್ನಾಗಿ ಮಾಡುವುದು ಸಾಧ್ಯವೇ?"

"ಹೌದು! ಸಂದೇಹವೇನು?"

"ಎಲ್ಲರೂ ಮಾಡುವರೇ? ಅವರಲ್ಲಿ ಕೆಲವರ ಹೆಸರನ್ನು ಹೇಳುವಿಯಾ?"

"ಎಲ್ಲರೂ"

"ಓಹೋ! ಏನು ಆಶ್ಚರ್ಯ! ಎಷ್ಟು ಶುಭಸಂಗತಿ! ಸರಿ. ನ್ಯಾಯಸಭೆಯ ಸದಸ್ಯರಲ್ಲದೆ ಇಲ್ಲಿನ ಪ್ರೇಕ್ಷಕರೂ ಈ ಕೆಲಸಕ್ಕೆ ಸಮರ್ಥರೇ?"

"ಅವರೂ ಹೌದು."

"ನಮ್ಮ ೧ ಮಂತ್ರಾಲೋಚನ ಸಭೆಯವರೋ?"

"ಅವರೂ ಹೌದು"

---

೧. ಅಥೆನ್ಸಿನ ಆಡಳಿತದಲ್ಲಿ ೫೦೦ ಜನರು ಕೂಡಿದ, ಜನರಿಂದ ಆರಿಸಲ್ಪಟ್ಟ ಮಹಾಸಭೆಯು ನ್ಯಾಯವಿಮರ್ಶೆಯನ್ನು ಮಾಡುವುದಕ್ಕೆಂದು ಮಾತ್ರ ಏರ್ಪಾಡಾಗಿತ್ತು. ಆದರೆ ಇತರ ಅಧಿಕಾರಗಳನ್ನು ಆಡಳಿತದ ಜವಾಬ್ದಾರಿಯನ್ನು ವಹಿಸಲು ೪೦೦ ಜನರು ಕೂಡಿದ ಬೇರೊಂದು ಮಂತ್ರಾಲೋಚನೆ ಸಭೆಯಿದ್ದಿತು.

" ನಮ್ಮ ನಗರಸಭೆಯುವರೋ೧ ? "

" ಅವರೂ ಹೌದು "

" ಅವರೆಲ್ಲರೂ ಯುವಕರಿಗೆ ಬೋಧನೆಯನ್ನು ಮಾಡಲ ರ್ಹರೋ? ಅಥವಾ ಅವರಲ್ಲಿ ಕೆಲವರು ಹುಡುಗರ ನಡತೆಯನ್ನು ಕೆಡಿಸುವವರೂ ಇರುವರೋ ? "

" ಇಲ್ಲ ಅವರೆಲ್ಲರೂ ಯುವಕರನ್ನು ಸನ್ಮಾರ್ಗಪ್ರವರ್ತಕರ ನ್ನಾಗಿ ಮಾಡುವವರು. "

" ಅಂದರೆ ಮೇಲೀಟಸ್ಸನೇ ! ಆಥೆನ್ಸ್ ನಗರದಲ್ಲಿ ನಾನೊ ಬ್ಬನೇ ಮಕ್ಕಳನ್ನು ಕೆಡಿಸತಕ್ಕವನು. ಉಳಿದ ಎಲ್ಲಾ ಪುರನಿವಾಸಿ ಗಳೂ ಅವರಿಗೆ ಸದ್ಬೋಧೆಯನ್ನು ಮಾಡತಕ್ಕವರಲ್ಲವೇ ? "

" ಅದೇ ನಾನು ಹೇಳುವುದು "

" ಆಹಾ ! ನಾನು ಎಂತಹ ಕೆಟ್ಟವನು ನೋಡಿದಿರಾ? ಆದರೂ ಬಾಧಕವಿಲ್ಲ. ಹುಡುಗರನ್ನು ಸನ್ಮಾರ್ಗದಲ್ಲಿ ಪ್ರೇರಿಸತಕ್ಕ ವರು ಇಷ್ಟು ಜನರು ಇರುವುದರಿಂದ ನಾನೊಬ್ಬ ಮಾತ್ರ ಅವರಿಗೆ ದುರ್ಬೋಧನೆಯನ್ನು ಮಾಡಿದರೂ ಅವರು ಕೆಡರು. ಈ ಸುಳ್ಳು ಕಥೆಯನ್ನು ಕೇಳಿದಿರಿ. ಮೇಲೀಟಸ್ಸನು ಈ ವಿಷಯದಲ್ಲಿ ತನ್ನ ಬುದ್ಧಿಯನ್ನು ಓಡಿಸಲಿಲ್ಲವೆಂದು ನಿಮಗೆ ಚೆನ್ನಾಗಿ ಗೊತ್ತಾಗಿರು ವುದು. ಯುವಕರ ವಿಷಯವಾಗಿ ಇವನು ಚಿಂತಿಸಿದ ಮಾತೇ ಸುಳ್ಳು. "

" ಮೇಲೀಟಸ್ಸನೇ, ನಾನು ತಿಳಿದು ತಿಳಿದೂ ಯುವಕರಲ್ಲಿ ದುರ್ಬೋಧನೆಯನ್ನು ಹಬ್ಬಿಸಿದನೇ, ಅಥವಾ ತಿಳಿಯದೇ ಮಾಡಿ ದೆನೇ ? "

---

೧. ಆಥೆನ್ಸಿನಲ್ಲಿ ವಾಸವಾಗಿದ್ದ ೧೦ ಜಾತಿಗಳವರು ಸೇರಿ, ರಾಜಾಂಗದಲ್ಲಿ ಭಾಗ ತೆಗೆದುಕೊಳ್ಳಲು ಜವಾಬ್ದಾರಿಯನ್ನು ವಹಿಸಲು ಅರ್ಹರಾದ ೫೦೦ ಜನರಿರುವ ಒಂದು ಕೂಟವನ್ನು ಏರ್ಪಡಿಸಿಕೊಂಡಿದ್ದರು. ಇವರೆಲ್ಲರೂ ನಗ ರದ ಪ್ರಮುಖರು.

"ತಿಳಿದು ತಿಳಿದೂ ಮಾಡಿರುವಿ"

"ಅಪ್ಪಾ! ಕೆಟ್ಟವರಿಂದ ಇತರರಿಗೆ ಕೇಡೇ ಸಂಭವಿಸುವುದಲ್ಲವೇ?"

"ಹೌದು"

"ಯಾರಾದರೂ ತನಗೆ ಕೇಡಾಗುವ ದಾರಿಯನ್ನೇ ಮನವರಿದು ಹಿಡಿಯುವರೇ?"

"ಇಲ್ಲ"

"ಆದರೆ ನೀನು ಹೇಳುವುದೇನು? ನಾನು ಚಿಕ್ಕವರೆಲ್ಲರನ್ನೂ ಕೆಟ್ಟದಾರಿಯಲ್ಲಿ ತಿರುಗಿಸಿ ನನ್ನ ನಾಡಿಗೇ—ಅಂದರೆ ಇತರರೊಂದಿಗೆ ನನಗೂ—ಅವರು ಕೇಡೆಸಗುವಂತೆ ಮಾಡುವೆನು, ಎಂದಲ್ಲವೇ ನೀನು ಹೇಳುವುದು? ನನಗೇ ಹಾನಿಯಾಗುವಂತೆ ತಿಳಿದು ತಿಳಿದೂ ಪ್ರವರ್ತಿಸುವೆನೆಂದು ನೀನು ಹೇಳುತ್ತೀಯಾ? ನನಗೆ ಒಳ್ಳೆಯದೇನೆಂದು ನನಗೇ ತಿಳಿಯದು. ನೀನು ಪೂರ್ವವಯಸ್ಕನಾದರೂ ಇದು ನಿನಗೆ ಗೊತ್ತಾಯಿತಲ್ಲವೇ? ಅಪ್ಪಾ! ಇದನ್ನು ನಾನು ನಂಬಲಿಕ್ಕಾಗುವುದಿಲ್ಲ. ಯಾರೂ ನಂಬರು."

ಅಥೆನ್ಸಿನ ಮಹಾನಿವಾಸಿಗಳೇ! ಚಿಕ್ಕವರನ್ನು ಮನವರಿತು ನಾನು ಕೆಡಿಸಲಿಕ್ಕಾಗುವುದಿಲ್ಲ. ಇದು ನಿರಾಧಾರವಾದ ಆರೋಪಣೆ. ಆದರೆ ತಿಳಿಯದೆ ಒಂದುವೇಳೆ ನಾನು ಹೀಗೆ ಮಾಡಬಹುದು. ತಿಳಿಯದೆ ಮಾಡಿದ ತಪ್ಪುಗಳಿಗೆ ದಂಡನೆಯನ್ನು ಹೇಗೆ ವಿಧಿಸುವುದು? ಅದಕ್ಕೆ ಮೇಲೇಟಸ್ಸನು ನನ್ನನ್ನು ಪ್ರತ್ಯೇಕವಾಗಿ ಕರೆದುಕೊಂಡುಹೋಗಿ ನನಗೆ ಸದ್ಬುದ್ಧಿಯನ್ನು ಕಲಿಸಬೇಕು ಅವನಿಂದ ನನಗೆ ತಿಳಿವಳಿಕೆ ಬಂದಕೂಡಲೇ ತಿಳಿಯದೇ ನಾನು ಮಾಡುವ ದುಷ್ಕಾರ್ಯಗಳನ್ನು ನಾನಾಗಿಯೇ ನಿಲ್ಲಿಸುವೆನಲ್ಲವೇ? ಅವನು ಹಾಗೆ ಮಾಡದೆ ನನ್ನನ್ನು ದಂಡಿಸುವುದಕ್ಕಾಗಿ ನ್ಯಾಯಸ್ಥಾನಕ್ಕೆ ಕರೆದುಕೊಂಡು ಬಂದು ನಿಲ್ಲಿಸಿಬಿಟ್ಟನು. ನಿಜವು ನಿಮಗೆ ಮುಂದಟ್ಟಾಗಿರುವುದು. ಮಹಾನಗರ ನಿವಾಸಿಗಳೇ! ತಾನು ಸ್ವಲ್ಪವೂ ವಿಚಾರ

ವಾಡದ ವಿಷಯಗಳಲ್ಲಿ ಮೇಲೀಟಸ್ಸನು ಹೊಕ್ಕು ಕಪಟವೇಷವನ್ನು ತಾಳಿರುವನು.

(ಮತ್ತೆ ಸೋಕ್ರಟೀಸನು ಮೇಲೀಟಸ್ಸನನ್ನು ಕುರಿತು ಪ್ರಶ್ನೆ ಮಾಡಿದನು. ಅವನು ಉತ್ತರ ಕೊಡಲು ಅಶಕ್ತನಾಗಿ ಮರುಳಾಗಿ ನಿಂತನು. ಹೊಸ ದೇವತೆಗಳನ್ನಾದರೂ ಕೂಡ ಯಾವುದೋ ದೇವ ತೆಗಳುಂಟು ಎಂದು ತಿಳಿದಲ್ಲವೇ ನಂಬುವುದು? ದೇವತೆಗಳನ್ನು ಕಲ್ಪಿಸಿದುದು ನಿಜವಾದರೆ ಧರ್ಮನಾಸ್ತಿಕರಾಗರೆಂದೂ ಯಾವ ದೇವ ತೆಗಳನ್ನಾದರೂ ನಂಬಿರುವುದನ್ನೊಪ್ಪಿಕೊಂಡರೆ ದೈವವನ್ನೂ ಪರಮ ಪುರುಷನನ್ನೂ ನಿಜವೆಂದು ಒಪ್ಪಿಕೊಂಡಂತೆಯೂ ಆಗಲಿಲ್ಲವೇ? ಹೀಗಿದ್ದ ಪಕ್ಷದಲ್ಲಿ ತಮ್ಮ ಮೇಲೆ ಆರೋಪಿಸುವ ನಾಸ್ತಿಕತ್ವವು ಸುಳ್ಳಿನ ಆರೋಪಣೆಯಲ್ಲವೆ ಎಂದು ತೋರಿಸಿದನು.)

ಅಥೆನ್ಸ್ ಮಹಾಜನರೇ! ಮೇಲೀಟಸ್ಸನು ಆರೋಪಿಸುವ ಅಪ ರಾಧವು ಸುಳ್ಳೆಂದು ನಾನು ಹೆಚ್ಚಾಗಿ ಬೆಳಸ ಹೇಳಬೇಕಾಗಿಲ್ಲ. ಅನೇ ಕರನ್ನು ನನ್ನ ಶತ್ರುಗಳನ್ನಾಗಿ ಮಾಡಿಕೊಂಡುಬಿಟ್ಟಿರುವೆನು. ಈ ಕಾರಣದಿಂದ ನಾನು ದಂಡನೆಗೆ ಗುರಿಯಾಗಬೇಕೇ ಹೊರತು ಈಗ ವಾದಿಗಳಾಗಿ ನಿಲ್ಲುವವರು ನನ್ನ ಮೇಲೆ ಅಪರಾಧವನ್ನು ಸಾಧಿಸಿ, ನನ್ನನ್ನು ದಂಡನೆಗೆ ಗುರಿಮಾಡಲಾಗದು. ವಾದಿಗಳು ಜನಸಮೂ ಹದ ಮನಸ್ಸನ್ನು ಕೆಡಿಸಿ ಅವರಿಗೆ ನನ್ನ ಮೇಲೆ ಸಂಶಯವೂ, ದುರ ಭಿಪ್ರಾಯವೂ ಉಂಟಾಗುವಂತೆ ಮಾಡಿರುವರು. ಲೋಕದಲ್ಲಿ ಇದು ಹೊಸ ಆಚರಣೆಯಲ್ಲ. ಇದಕ್ಕೆ ಮೊದಲು ಎಷ್ಟೋ ಸತ್ಪುರುಷ ರನ್ನು ಪಾಮರ ಜನರು ಕೋಪದಿಂದಲೂ ಅಜ್ಞಾನದಿಂದಲೂ ಕೊಂ ದಿರುವರು. ನಾನೂ ಜನಗಳ ಅಜ್ಞಾನಕ್ಕೆ ಆಹುತಿಯಾಗುವೆನು. ಇನ್ನು ಮುಂದೆಯೂ ಎಷ್ಟೋ ಜನರು ಧರ್ಮಕ್ಕಾಗಿ ಪ್ರಾಣತ್ಯಾಗ ಮಾಡುವರು. ಇದು ದಿಟ. ೧

---

೧. ಈರೀತಿ ಅಪರಾಧವನ್ನು ಹೊರಸಿಯೇ ಐನೂರು ವರ್ಷಗಳಾದ ಮೇಲೆ ಹುಟ್ಟಿದ ಏಸುಕ್ರಿಸ್ತನನ್ನು ಅವರ ದೇಶೀಯರು ದಂಡನೆಗೆ ಗುರಿಮಾಡಿ ಕೊಂದರು. ಈ ವಿಷಯವನ್ನು ಕ್ರಿಸ್ತನ ಚರಿತ್ರೆಯಾದ ಬೈಬಲ್ಲಿನಲ್ಲಿ ಕಾಣಬಹುದು.

ನಿಮ್ಮಲ್ಲಿ ಕೆಲವರು, "ನೀನು ಹೇಳುವುದು ಸರಿಯೇ. ಆದರೆ ಈರೀತಿ ನಿನ್ನ ಪ್ರಾಣಕ್ಕೆ ಹಾನಿಕರವಾದ ಕಾರ್ಯಗಳನ್ನು ಏತಕ್ಕೆ ಮಾಡುತ್ತಿರುವಿ. ಆ ಕಾರ್ಯಗಳನ್ನು ಬಿಟ್ಟುಬಿಡಬಹುದಲ್ಲ" ಎಂದು ಕೇಳಬಹುದು. ಅದಕ್ಕೆ ಉತ್ತರವನ್ನು ನಾನು ಈರೀತಿ ಹೇಳುವೆನು : "ಅಯ್ಯಗಳಿರಾ ! ನೀವು ಹೇಳುವುದು ನೀತಿಯಲ್ಲ. ಮನಷ್ಯನಾಗಿ ಹುಟ್ಟಿದವನು ಯಾವುದಾದರೊಂದು ಕಾರ್ಯವನ್ನು ಮಾಡಲು ಉಪ ಕ್ರಮಿಸಿದರೆ ಅದು ಧರ್ಮವೇ ಅಧರ್ಮವೇ ಎಂದು ವಿಚಾರಿಸಿ ಮಾಡ ಬೇಕೇ ಹೊರತು ಅದರಿಂದ ತನ್ನ ಪ್ರಾಣಕ್ಕೆ ಯಾವುದಾದರು ಅಪಾಯ ಬರುವುದೇ ಇಲ್ಲವೇ ಎಂದಾಗಲಿ ಅಥವಾ ಬೇರೆ ವಿಷಯಗ ಳನ್ನಾಗಲಿ ಮನಸ್ಸಿನಲ್ಲಿಟ್ಟುಕೊಳ್ಳಕೂಡದು ಸತ್ಕಾರ್ಯವೇ, ದುಷ್ಕಾ ರ್ಯವೇ, ಧರ್ಮಮಾರ್ಗದಲ್ಲಿ ನಿಲ್ಲುವವನು ಮಾಡತಕ್ಕದ್ದೇ ಇಲ್ಲವೇ ಈ ವಿಷಯವನ್ನು ಮಾತ್ರ ನೋಡಬೇಕು. ಟ್ರೋಜನ್ ದಂಡಯಾ ತ್ರೆಗೆ ೧ ಹೋದ ವೀರರು ತಮ್ಮ ಪ್ರಾಣಗಳನ್ನು ಕಾಪಾಡಿಕೊಳ್ಳಬೇ ಕೆಂದು ಎಣಿಸಿದರೆ ; ಅಥವಾ ಧರ್ಮವನ್ನು ಮಾತ್ರ ಲಕ್ಷ್ಯದಲ್ಲಿಟ್ಟಿ ದ್ದರೇ ? ಪ್ರಾಣವನ್ನು ತೃಣವೆಂದೆಣಿಸಿ ಮಾನವನ್ನೂ ಧರ್ಮವನ್ನೂ ಹಿರಿದಾಗಿಮಾಡಿಯಲ್ಲವೇ ಅವರು ಯುದ್ಧಕ್ಕೆ ಹೊರಟರು. "ಅಧ ರ್ಮಮಾಡಿದವನನ್ನು ಕೊಂದು ಅನಂತರ ನನ್ನ ಪ್ರಾಣವನ್ನು ಬಿಡಲು ಸಮ್ಮತಿಸುವೆನೇ ಹೊರತು ಹಿಂದುಳಿದು ಲೋಕಾಪವಾದಕ್ಕೆ ಗುರಿ ಯಾಗಿ ಬದುಕಲಾರೆ" ಎಂಬುದಲ್ಲವೇ ವೀರರ ವಾಕ್ಯ? ತನ್ನ ಪ್ರಾಣವನ್ನು ಹೇಗೆ ಕಾಪಾಡಿಕೊಳ್ಳುವುದೆಂದು ಯೋಚಿಸಿದವನು ವೀರನೆ? ನನ್ನ ಮನಸ್ಸಿನಲ್ಲಿ ಎಳ್ಳಷ್ಟಾದರೂ ಸಂದೇಹವಿಲ್ಲದೆ ನಾನು ನಂಬಿರುವ ಧರ್ಮಮಾರ್ಗ ಒಂದೇ. ಆ ಮಾರ್ಗದಲ್ಲಿಯೇ

---

೧. ನಮ್ಮ ರಾಮಾಯಣ ಮಹಾಭಾರತಗಳನ್ನು ನಾವು ಯಾವರೀತಿಯಲ್ಲಿ ಪೂಜ್ಯಗ್ರಂಥಗಳೆಂದು ಎಣಿಸುವೆವೋ ಅದೇರೀತಿ ಗ್ರೀಕರಿಗೂ ಒಂದು ದೈವಿಕ ಇತಿ ಹಾಸ ಉಂಟು. ಅವರ ಆದಿಕವಿಯಾದ ಹೋಮರನು ಇಲಿಯಡ್ ಮತ್ತು ಒಡಿಸ್ಸಿ ಎಂಬ ಕಾವ್ಯಗಳಲ್ಲಿ ಈ ಪೂರ್ವಕಾಲದ ವೀರರ ಚರಿತ್ರೆಯನ್ನು ಬರೆದಿರುವನು. ಅದ ರಿಂದ ಸೋಕ್ರಟೀಸನು ದೃಷ್ಟಾಂತಗಳನ್ನು ಎತ್ತಿ ಹೇಳಿದನು.

ನಾನು ನಡೆಯುವೆನು. ಒಬ್ಬನು ತಾನಾಗಿಯೇ ತೆಗೆದುಕೊಂಡುದೊ ಅಥವಾ ತನ್ನ ಯಜಮಾನನು ತನಗೆಂದು ನೇಮಿಸಿದ ಕರ್ತವ್ಯವೋ ಇಂತಹುದನ್ನು ಮಾಡುವುದರಲ್ಲಿ ಯಾವ ಅಪಾಯ ಅಥವಾ ಕಷ್ಟಗಳು ಬಂದರೂ ಅದನ್ನು ಮಾಡಿಯೇತೀರಬೇಕು. ಮರಣವನ್ನಾಗಲೀ, ಮಾನವನ್ನುಳಿದು ಬೇರೆ ಯಾವುದನ್ನಾಗಲೀ, ಮನಸ್ಸಿನಲ್ಲಿ ಎಣಿಸಿ ಹಿಂತೆಗೆಯಕೂಡದು.

ಪೊಟೀಡಿಯಾ ೧ ಎಂಬ ಸ್ಥಳದಲ್ಲಿಯೂ, ಅಂಫಿಪಾಲಿಸ್ ೧ ಎಂಬಲ್ಲಿಯೂ, ಡೀಲಿಯಂ ೧ ನಲ್ಲಿಯೂ ನೀವು ಕಳುಹಿಸಿದ ಸೇನಾಧಿಪತಿಗಳು ನನ್ನನ್ನು ಯುದ್ಧರಂಗದಲ್ಲಿ ಯಾವ ಸ್ಥಳದಲ್ಲಿ ಯಾವ ಕೆಲಸಕ್ಕೆಂದು ನಿಲ್ಲಿಸಿದರೋ ಆ ಸ್ಥಳವನ್ನೂ ಕೆಲಸವನ್ನೂ ಬಿಟ್ಟು ಕದಲದೆ, ಮರಣಕ್ಕೆ ಭೀತಿಗೊಳ್ಳದೆ, ಇತರರಂತೆ ನಾನೂ ನಿಂತೇ ಇರಲಿಲ್ಲವೇ ? ಈಗಮಾತ್ರ ಪ್ರಾಣವನ್ನುಳಿಸಿಕೊಳ್ಳುವುದಕ್ಕಾಗಿಯೋ ಅಥವಾ ಬೇರೆ ಭೀತಿಯಿಂದಲೋ ನನ್ನ ಈಶ್ವರನು ನನಗೆ ನೇಮಿಸಿರುವನೆಂದು ನಾನು ಭಾವಿಸಿರುವ ಕರ್ತವ್ಯವನ್ನು ಮಾಡದೆ ಇರುವೆನೇ? ಮೌಢ್ಯದಲ್ಲಿಯೂ ಅಜ್ಞಾನದಲ್ಲಿಯೂ ಮುಳುಗಿರುವವರನ್ನು ಪರೀಕ್ಷಿಸಿ ಅವರ ಅಜ್ಞಾನವನ್ನು ಅವರಿಗೇ ತೋರಿಸಿ ಕೊಡುವುದು ಈಶ್ವರನು ನನಗೆ ನೇಮಿಸಿರುವ ಕೆಲಸವೆಂದು ನಾನು ನಂಬಿರುವೆನು. ಆ ಧ್ಯೇಯವನ್ನು ಬಿಡದೆ ನಾನು ನಡೆದುಕೊಳ್ಳಲೇಬೇಕು. ಮರಣವಾಗಲೀ ಅಥವಾ ಬೇರೆ ಆಪತ್ತಾಗಲೀ ಬರುವುದೆಂದು ಭಯಪಟ್ಟು, ಈಶ್ವರನ ಆಜ್ಞೆಯನ್ನು ಉಲ್ಲಂಘಿಸಿ, ಪ್ರಾಣವನ್ನೂ ಸುಖವನ್ನೂ ಮುಖ್ಯವೆಂದು ನಾನು ಎಣಿಸುವದಾದರೆ ಆಗ ಮಾತ್ರ ನನ್ನನ್ನು ನಾಸ್ತಿಕನೆಂದು ನೀವು ನಿಶ್ಚಯವಾಗಿ ಹೇಳಬಹುದು. ಅದಕ್ಕಾಗಿ ನ್ಯಾಯಸ್ಥಳದಲ್ಲಿ ನಿಲ್ಲಿಸಿ ವಿಚಾರಣೆಯನ್ನುಮಾಡಿ ದಂಡಿಸಬಹುದು.

---

೧. ಈ ಯುದ್ಧಗಳಲ್ಲಿ ಸೋಕ್ರಟೀಸನು ರಣಾಂಗಣಕ್ಕೆ ಹೋದನು. ಡೀಲಿಯಂ ಯುದ್ಧದಲ್ಲಿ (ಕ್ರಿ. ಪೂ. ೪೨೪) ಆಥೆನ್ಸ್ ಜನರು ಸೋತರು.

ಹಾಗೆ ನಾನು ಮಾಡಿದಪಕ್ಷಕ್ಕೆ ಡೆಲ್ಫಿಸನ್ನಿಧಿಯಲ್ಲಿ ದೇವರು ಕೊಟ್ಟ ವಾಕ್ಯವನ್ನು ನಾನು ಉಪೇಕ್ಷೆಮಾಡಿ ದೇವರಲ್ಲಿ ಭಕ್ತಿಯನ್ನೂ ಧರ್ಮದಲ್ಲಿ ನಂಬಿಕೆಯನ್ನೂ ತಪ್ಪಿ, ಪ್ರಾಣವನ್ನುಮಾತ್ರ ಉಳಿಸಿಕೊಂಡು ಬದುಕುವವನಾಗುವೆನು. ಅಜ್ಞಾನವನ್ನು ಪೂರ್ಣಜ್ಞಾನವೆಂದು ಎಣಿಸುವುದೇ ಲೋಕದ ಜನರ ದೊಡ್ಡ ತಪ್ಪು. ಮರಣವನ್ನು ಕಂಡು ಭೀತಿಗೊಂಡವನಾದರೆ ನಾನೂ ಆ ದೊಡ್ಡ ತಪ್ಪಿಗೆ ಒಳಗಾಗುವೆನು. ಮರಣವನ್ನು ನಾವೇತಕ್ಕೆ ಅನಿಷ್ಟವೆಂದೆಣಿಸಬೇಕು? ಮರಣಾನಂತರ ನಮ್ಮ ಆತ್ಮಕ್ಕೆ ಏನು ಸಂಭವಿಸುವುದೆಂದು ನಾವು ತಿಳಿಯದೆ ಇದ್ದಮೇಲೆ ಏತಕ್ಕೆ ಅದನ್ನು ಒಂದು ದೊಡ್ಡ ವಿಪತ್ತೆಂದು ತೀರ್ಮಾನಿಸಿ ಅದರ ವಿಚಾರವಾಗಿ ಭಯಪಡಬೇಕು? ಆದುದರಿಂದ ಮಹಾಜನರೇ! ನಾನು ಮರಣವನ್ನು ಒಂದು ದೊಡ್ಡ ವಿಪತ್ತೆಂದು ಎಣಿಸಿಲ್ಲ. ಮರಣವನ್ನು ಕಂಡು ಭಯಪಡುವುದು ಅಜ್ಞಾನ. ಸತ್ತಮೇಲೆ ನನ್ನಗತಿ ಏನಾಗುವುದೋ ನನಗೆ ತಿಳಿಯದು. ಆದುದರಿಂದ ಮರಣಕ್ಕಾಗಿ ಭಯಪಟ್ಟು ನಾನು ಒಂದು ಕೆಲಸವನ್ನು ಬಿಡಲಾರೆ. ಮಾಡದೆಯೂ ಇರಲಾರೆ. ತಪ್ಪೆಂದು ನಾನು ತಿಳಿದಿರುವುದನ್ನು ನಾನು ಮಾಡೆನು. ಮಾಡಬೇಕಾದ ಕರ್ತವ್ಯವನ್ನು ಮರಣಭಯದಿಂದ ಮಾಡದೆ ಇರಲಾರೆನು.

ನನ್ನನ್ನು ಬಿಡುಗಡೆ ಮಾಡಿದರೆ, ನನ್ನ ಮೇಲೆ ವಿಚಾರಣೆಯನ್ನು ಉಪಕ್ರಮಿಸಿದುದು ತಪ್ಪಾಗುವುದೆಂದೂ, ನನಗೆ ಮರಣದಂಡನೆಯನ್ನು ವಿಧಿಸದೆ ಬಿಟ್ಟರೆ ನಿಮ್ಮ ಮಕ್ಕಳೆಲ್ಲರೂ ನನ್ನ ಕುತರ್ಕವನ್ನನುಸರಿಸಿ ಶುದ್ಧವಾಗಿ ಕೆಟ್ಟುಹೋಗುವರೆಂದೂ, ಆದುದರಿಂದ ನನಗೆ ಮರಣದಂಡನೆಯನ್ನು ವಿಧಿಸಿಯೇತೀರಬೇಕೆಂದು ಅನೀಟಸ್ಸನು ಹೇಳಿದನಷ್ಟೆ.

ಒಂದುವೇಳೆ ನೀವು ಅದನ್ನು ಒಪ್ಪದೆ, "ಈಸಲ ನಿನ್ನನ್ನು ಮನ್ನಿಸಿರುವೆವು. ನಿನಗೆ ಮರಣವನ್ನು ವಿಧಿಸುವುದಿಲ್ಲ. ನೀನು ಜೀವದೊಡನೆ ಹೋಗಬಹುದು. ಆದರೆ ನೀನು ಇನ್ನುಮುಂದೆ ಈ ಕಾರ್ಯ

ವನ್ನು ಬಿಟ್ಟುಬಿಡಬೇಕು. ನೀನು ಇನ್ನು ಮುಂದೆ ನಿಮ್ಮ ಜನರನ್ನು ಪರೀಕ್ಷಿಸುವುದನ್ನು ಬಿಟ್ಟುಬಿಡು. ಮತ್ತೆ ಈ ಕೆಲಸಕ್ಕೆ ಕೈಹಾಕಿದರೆ ಮರಣವನ್ನು ಹೊಂದುವೆ." ಎಂದು ನನಗೆ ಉತ್ತರಕೊಟ್ಟರೆ ನಾನು ವಿನಯಪೂರ್ವಕ ಹೇಳುವುದೇನೆಂದರೆ: "ಆಥೆನ್ಸ್ ಮಹಾ ನಗರದ ಪ್ರಜೆಗಳೇ! ನಿಮ್ಮಲ್ಲಿ ನನಗಿರುವ ಪ್ರೇಮವು ಕುಂದಿಲ್ಲ. ಆದರೆ ನೀವು ನನಗಿತ್ತ ಆಜ್ಞೆಗಿಂತಲೂ ಈಶ್ವರನಿತ್ತ ಆಜ್ಞೆಯೇ ದೊಡ್ಡದು. ನನ್ನಲ್ಲಿ ಪ್ರಾಣವೂ ಶಕ್ತಿಯೂ ಇರುವವರೆಗೆ ನಾನು ಸತ್ಯಶೋಧನೆಯಲ್ಲಿಯೇ ನನ್ನ ಜೀವಮಾನವನ್ನು ಕಳೆಯುವೆನು. ನಾನು ಯಾರನ್ನು ಕಂಡರೂ 'ಅಯ್ಯಾ ಮಿತ್ರನೇ! ಆಥೆನ್ಸ್ ನಗರವು ಮಹಾಕೀರ್ತಿಯನ್ನು ಹೊಂದಿದ ನಗರ. ಜ್ಞಾನಕ್ಕೆ ತೌರುಮನೆಯೆಂದು ಹೆಸರುವಾಸಿಯಾದ ನಗರ. ಈ ಮಹಾನಗರದಲ್ಲಿರುವವರಲ್ಲಿ ಒಬ್ಬನಾದ ನೀನು ಏತಕ್ಕೆ ಅಸ್ಥಿರವಾದ ಸಂಪತ್ತು, ಹೆಸರು, ಮರ್ಯಾದೆ ಇವುಗಳಿಗೆ ಆಶೆಪಟ್ಟು ವ್ಯರ್ಥವಾಗಿ ಬಾಳನ್ನು ಕಳೆಯುವೆ. ಜ್ಞಾನವನ್ನೂ ಸತ್ಯವನ್ನೂ ಹೊಂದಲು ಬಯಸಲಾರೆಯೋ! ನಿನ್ನ ಆತ್ಮವನ್ನು ಪರಿಪಕ್ವವನ್ನಾಗಿ ಮಾಡಿಕೊಳ್ಳಲಾರೆಯೋ?" ಎಂದು ಕೇಳುತ್ತಲೇ ಇರುವೆನು. 'ಇಲ್ಲ ನೀನು ಹೇಳುವುದು ಸರಿಯಲ್ಲ. ಜ್ಞಾನವೂ ಸತ್ಯವೂ ನನಗೆ ಬೇಕಿಲ್ಲ' ಎಂದು ನನಗೆ ಅವನು ಪ್ರತ್ಯುತ್ತರವನ್ನು ಹೇಳಿಬಿಟ್ಟರೆ ಅಲ್ಲಿಗೇ ಅವನನ್ನು ಬಿಟ್ಟುಬಿಡಲಾರೆ. ಅವನಿಗೆ ಪ್ರಶ್ನೆಗಳನ್ನು ಹಾಕಿ, ಶೋಧಿಸಿ, 'ಅಯ್ಯಾ, ಉತ್ಕೃಷ್ಟವಾದ ಸತ್ವಪುಳ್ಳ ಪದಾರ್ಥವನ್ನು ಅಲಕ್ಷ್ಯ ಮಾಡಿ ಉಪಯೋಗವಿಲ್ಲದ ಪದಾರ್ಥಗಳ ಮೇಲೆ ಆಶೆಯಿಟ್ಟು ಕಾಲವನ್ನು ಕಳೆಯುವಿಯಲ್ಲ' ಎಂದು ಅವನನ್ನು ಖಂಡಿಸುವೆನು. ಯುವಕನನ್ನಾದರೂ ಸರಿ, ಮುಪ್ಪಿನವನನ್ನಾದರೂ ಸರಿ, ಎಲ್ಲರನ್ನೂ ಈರೀತಿ ಶೋಧಿಸಿ ಖಂಡಿಸುವೆನು. ನನ್ನ ನಗರಕ್ಕೆ ಸೇರಿದವರು ನನಗೆ ಬಹಳ ಬೇಕಾದವರಾದುದರಿಂದ ಅವರನ್ನೇ ಈರೀತಿ ಹೆಚ್ಚಾಗಿ ಶೋಧಿಸುವೆನು. ಇದು ಈಶ್ವರನು ನನಗಿತ್ತ ಆಜ್ಞೆಯೆಂದು ನೀವು ತಿಳಿಯಬೇಕು. ನಾನು ದೇವರ ಆಜ್ಞೆಯನ್ನು ಶಿರಸಾವಹಿಸಿ ನನ್ನ

ಜೀವಮಾನವೆಲ್ಲವನ್ನೂ ಈರೀತಿ ಕಳೆಯುವುದರಿಂದ ನಮ್ಮ ನಗರಕ್ಕೆ ನಾನು ಮಹದುಪಕಾರವಮಾಡುವೆನೆಂದು ನಾನು ಎಣಿಸಿದ್ದೇನೆ. ನಾನು ನಿಮಗೆ ಹೇಳುವುದಾದರೂ ಏನು? ಮೊದಲು ಆತ್ಮದ ಕಡೆ ಲಕ್ಷ್ಯವಿಡಿ. ಅದನ್ನು ಶುದ್ಧಪಡಿಸಿಕೊಂಡು, ಅದಕ್ಕೆ ಬಲ ಬಂದು ಪಕ್ವವಾದ ಮೇಲೆ ನಿಮ್ಮ ದೇಹವನ್ನೂ ಧನವನ್ನೂ ಗಮನಿಸಿ. ನಿಮ್ಮ ಧನದಿಂದ ಆತ್ಮಶುದ್ಧಿಯೂ ಧನವೂ ಉಂಟಾಗಲಿ. ಅಂದರೆ ಆತ್ಮ ಶುದ್ಧಿ ಧರ್ಮ ಇವುಗಳಿಂದಲೇ ಧನವನ್ನೂ ಸುಖವನ್ನೂ, ಲೋಕವು ಪಡೆಯಲೆಳಸುವ ಎಲ್ಲ ಇಷ್ಟಾರ್ಥಗಳನ್ನೂ ಹೊಂದಬಹುವು.'' ಎಂಬುದನ್ನು ದೂರಿಗೂ ತಿರಸ್ಕಾರಕ್ಕೂ ಮರಣಕ್ಕೂ ಹೆದರದೆ ಸದಾ ಹೀಗೆ ಬೋಧಿಸುತ್ತಾ ಬರುವುದು ತಪ್ಪಾದರೆ ನಾನು ಅಪರಾಧಿಯೇ ಸರಿ. ಆದರೆ ಹೀಗಲ್ಲದೆ ನಾನು ಬೇರೆ ರೀತಿ ಪ್ರವರ್ತಿಸುವೆನೆಂದು ಹೇಳುವುದು ಸುಳ್ಳಾಗುವುದು. ಆದುದರಿಂದ ಆಥೆನ್ಸ್ ಮಹಾನಗರ ನಿವಾಸಿಗಳೇ! ಅನೀಟಸ್ಸನು ಹೇಳಿದಂತೆ ನನಗೆ ಮರಣದಂಡನೆ ಯನ್ನು ವಿಧಿಸಿರಿ. ಇಲ್ಲವೆ ನಾನು ಹೇಳುವುದನ್ನು ಒಪ್ಪಿಕೊಂಡು ನನ್ನನ್ನು ಬಿಡುಗಡೆಮಾಡಿರಿ. ನಾನು ಇದುವರಿಗೂ ಮಾಡುತ್ತಾ ಬಂದ, ದೇವರು ವಿಧಿಸಿದ, ಕೆಲಸವನ್ನು ಬಿಟ್ಟುಬಿಡಬೇಕೆಂದು ಹೇಳ ಬೇಡಿರಿ. ಅದಕ್ಕಾಗಿ ಹತ್ತಾರಷ್ಟು ನನ್ನ ಪ್ರಾಣವನ್ನು ಒಪ್ಪಿಸಲು ಸಿದ್ಧನಾಗಿರುವೆನು.

ನನ್ನನ್ನು ಕೊಲ್ಲುವುದರಿಂದ ನೀವಾಗಲಿ, ಮೇಲೇಟಸ್ಸನಾ ಗಲಿ, ಅನೀಟಸ್ಸನಾಗಲಿ ನನ್ನ ಆತ್ಮಕ್ಕೆ ಎಳ್ಳಷ್ಟಾದರೂ ದುಃಖ ವನ್ನುಂಟುಮಾಡಲಾರಿರಿ. ಈಶ್ವರನ ಧರ್ಮಮಾರ್ಗದಲ್ಲಿ ನಿಲ್ಲು ವವನಿಗೆ ಯಾವ ದುಃಖವೂ ಉಂಟಾಗುವುದಿಲ್ಲ. ನನಗೆ ಮರಣ ದಂಡನೆಯೋ ದೇಶಭ್ರಷ್ಟತೆಯೋ ಅಥವಾ ಸಮಾಜದ ಬಹಿಷ್ಕಾ ರವೋ ಆದರೆ ಇವು ಘೋರತಾಪಗಳೆಂದು ನೀವು ಎಣಿಸಬಹುದು. ಆದರೆ ಹಾಗಲ್ಲ. ಸಾವನ್ನು ಒಂದು ದೊಡ್ಡ ಕಷ್ಟವೆಂದಾಗಲಿ ಅನಿಷ್ಟವೆಂದಾಗಲಿ ನಾನು ಎಣಿಸುವುದಿಲ್ಲ. ಇಷ್ಟುಹೊತ್ತೂ ನಾನು ಮಾತನಾಡಿದುದೂ ನನ್ನನ್ನು ಕಾಪಾಡಿಕೊಳ್ಳುವುದಕ್ಕಲ್ಲ.

ಅನ್ಯಾಯವಾಗಿ ಈಶ್ವರನು ನಮಗೆ ಕೊಟ್ಟ ದೊಡ್ಡ ವಸ್ತುವನ್ನು ತಳ್ಳಿಹಾಕಿ ಅಧರ್ಮದಲ್ಲಿ ಇಳಿಯಬೇಡಿರಿ. ನೀವಾಗಿಯೇ ದುಃಖವನ್ನೂ ಕಷ್ಟವನ್ನೂ ಉಂಟುಮಾಡಿಕೊಳ್ಳಬೇಡಿರಿ ಎಂದೇ ನಾನು ನಿಮಗೆ ಹೇಳುವುದು. ನನ್ನನ್ನು ನೀವು ಕೊಂದರೆ ನಾನು ನಿಮಗೆ ಮಾಡುವ ಉಪಕಾರವನ್ನುಮಾಡಲು ಬೇರೆ ಯಾರೂ ಶೀಘ್ರದಲ್ಲಿ ಸಿಕ್ಕಲಾರರು. ಒಂದು ದೊಡ್ಡ ಸಿಂಹವು ತನ್ನ ಬಲವನ್ನು ಮರೆತು ನಿದ್ದೆಯಲ್ಲಿರುವಾಗ ಒಂದು ಸೊಳ್ಳೆಯು ಅದನ್ನು ಕಡಿದು ಹಿಂಸೆ ಮಾಡಿ ಎಬ್ಬಿಸುವಂತೆ ನಾನು ಅಥೆನ್ಸ್ ನಗರದ ಮಹಾಜನರು ತಮ್ಮ ಕರ್ತವ್ಯವನ್ನೂ ನಿಜವಾದ ಶಕ್ತಿಯನ್ನೂ ಮರೆತು ನಿದ್ರಾವಸ್ಥೆಯಲ್ಲಿರಲು ಅವರನ್ನು ಹಿಂಸಿಸಿ, ತಟ್ಟಿ, ಎಬ್ಬಿಸುತ್ತಿದ್ದೆನು. ಸೊಳ್ಳೆಯನ್ನು ಉಜ್ಜಿಕೊಲ್ಲುವಹಾಗೆ ನನ್ನನ್ನು ನೀವು ಸುಲಭವಾಗಿ ಕೊಂದು ತಾಮಸದಲ್ಲಿಯೂ ನಿದ್ದೆಯಲ್ಲಿಯೂ ಅಡ್ಡಿ ಇಲ್ಲದೆ ಇರಬಹುದು. ನಿದ್ದೆ ಹೋಗುತ್ತಿರುವವರನ್ನು ಎಬ್ಬಿಸಿದರೆ ಕೋಪ ಬರುವುದು ಸಹಜ ಆದರೆ ನಿಮ್ಮನ್ನು ನಾನು ಅಜ್ಞಾನದಿಂದ ತಟ್ಟಿ ಎಬ್ಬಿಸುವುದು ಒಳ್ಳೆಯದೇ ಅಲ್ಲವೇ ಎಂದು ವಿಚಾರ ಮಾಡುವಿರಾದರೆ ಈರೀತಿ ನನ್ನನ್ನು ಕೊಲ್ಲಲಾರಿರಿ. ಈ ಸೊಳ್ಳೆಯನ್ನು ನೀವು ಕೊಂದರೆ ಈಶ್ವರನು ನಿಮ್ಮನ್ನು ಎಬ್ಬಿಸಲು ಬೇರೊಂದು ಸೊಳ್ಳೆಯನ್ನು ಕಳುಹಿಸುವನೋ ಇಲ್ಲವೋ ಇದನ್ನು ಹೇಳುವುದು ಅಸಾಧ್ಯ. ಈಶ್ವರನು ನನಗೆ ಈ ಆಜ್ಞೆಯನ್ನು ಕೊಡದಿದ್ದರೆ ನಾನು ನನ್ನ ಕುಟುಂಬವನ್ನೂ, ಕೆಲಸಕಾರ್ಯಗಳೆಲ್ಲವನ್ನೂ ಇಷ್ಟು ವರ್ಷಗಳವರೆಗೂ ಗಮನಿಸದೆ ಏತಕ್ಕೆ ನಿಮ್ಮ ಪ್ರತಿಯೊಬ್ಬರ ಬಳಿಗೂ ಹೋಗಿ 'ಕೆಟ್ಟುಹೋಗಬೇಡಿ, ಆತ್ಮ ದೊಡ್ಡದು, ಧರ್ಮವು ದೊಡ್ಡದು; ಸನ್ಮಾರ್ಗದಲ್ಲಿರಿ; ನಿಜವಾದ ಜ್ಞಾನವನ್ನು ಹೊಂದಿ' ಎಂದು ಬೇಸರವಿಲ್ಲದೆ ತಂದೆಯಂತೆ, ಅಣ್ಣನಂತೆ, ರಾತ್ರಿಹಗಲು ಅಲೆದು ಬೋಧಿಸುತ್ತ ಬಂದಿರಬೇಕು? ಅದರಿಂದ ನನಗೆ ಯಾವ ವಿಧವಾದ ಪ್ರಯೋಜನವಾಗಲೀ ಇದ್ದಿದ್ದರೆ ನನ್ನ ಸ್ವಂತಲಾಭವನ್ನು ಬಯಸಿ ಈರೀತಿ ಮಾಡಿದೆನೆಂದು ಎಣಿಸ

ಬಹುದು. ಆದರೆ ನನ್ನಮೇಲೆ ಎಷ್ಟು ತಪ್ಪುಗಳನ್ನು ಹೊರಿಸಿದರೂ ಸ್ವಕಾರ್ಯಸಾಧನೆಗಾಗಿ, ಸ್ವಂತ ಲಾಭಕ್ಕಾಗಿ ಈರೀತಿ ಮಾಡುತ್ತಿರುವೆನೆಂದು ನನ್ನ ವಿರೋಧಿಗಳೂ ಹೇಳಲಿಲ್ಲ.

ಮರಣಕ್ಕೆ ಭಯಪಟ್ಟು ನಾನು ಯಾವ ಅಕ್ರಮವನ್ನಾದರೂ ಮಾಡಲಾರೆನೆಂದು ನೀವು ತಿಳಿದುಕೊಳ್ಳಲು ಬರೀ ಮಾತುಗಳನ್ನು ಮಾತ್ರ ಆಡದೆ ನಡೆದ ಎರಡು ವಿಷಯುಗಳನ್ನು ನಿಮ್ಮ ಲಕ್ಷ್ಯಕ್ಕೆ ತರುವೆನು ಕೇಳಿ. ಅರ್ಗಿನುಸೇ೧ ಯುದ್ಧ ನಡೆದಮೇಲೆ ಸೇನಾನಾಯಕರಾದ ಹತ್ತು ಜನರನ್ನು ವಿಚಾರಣೆಗೆ ಗುರಿಮಾಡಿದಿರಲ್ಲವೇ? ಆ ಸಮಯದಲ್ಲಿ ಅವರನ್ನು ಒಟ್ಟುಗೂಡಿಸಿ ಅವರಮೇಲೆ ತಪ್ಪು ಹೊರಿಸಿ ದಂಡನೆಯನ್ನು ವಿಧಿಸುವುದು ನ್ಯಾಯುವಲ್ಲವೆಂದು ನಾನು ಭಾವಿಸಿದೆನು. ಆ ಕಾಲದಲ್ಲಿ ನನ್ನ ಜಾತಿಯುವರಿಗೆ ಅಧ್ಯಕ್ಷಸ್ಥಾನಪದವಿ ಒದಗಿದ್ದು ನಾನೇ ೨ ಅಧ್ಯಕ್ಷನಾಗಿದ್ದೆನು. ಸೇನಾನಾಯಕರು

---

೧. ಇದು ಸ್ಪಾರ್ಟನರಮೇಲೆ ಕ್ರಿ. ಪೂ. ೪೦೬ರಲ್ಲಿ ಆಥೆನ್ಸ್ ಜಹಜುಗಳು ಜಯಹೊಂದಿದವು. ಆದರೆ ಅಕಸ್ಮಾತ್ತಾಗಿ ಒಂದು ಬಿರುಗಾಳಿ ಬಂದದ್ದರಿಂದ ಆಥೆನ್ಸಿನ ೨೫ ಹಡಗುಗಳು ಮುಳುಗಿದ್ದಲ್ಲದೆ ಯುದ್ಧದಲ್ಲಿ ಮರಣಹೊಂದಿದವರ ಶವಸಂಸ್ಕಾರ ಮಾಡುವುದಕ್ಕಾಗಲಿಲ್ಲ. ಗ್ರೀಕರಲ್ಲಿ ಶವಸಂಸ್ಕಾರ ವಿಷಯುದಲ್ಲಿ ಬಹಳ ಶ್ರದ್ಧೆಯಿತ್ತು. ಆದ್ದರಿಂದ ಈ ಸೇನಾನಾಯುಕರನ್ನು ಶಿಕ್ಷಿಸಬೇಕೆಂದು ಜನರು ಆಕ್ರೋಶಗೊಂಡರು. ಮಹಾಸಭೆಯಲ್ಲಿ ಅವರಮೇಲೆ ವ್ಯವಹಾರವನ್ನು ನಡೆಸಿದರು. ಕ್ರಮದಪ್ರಕಾರ ಮಹಾಸಭೆಯವರ ಮುಂದೆ ಈ ವ್ಯವಹಾರ ಬರಬಾರದಾಗಿತ್ತು. ಪ್ರತ್ಯೇಕವಾಗಿ ಒಬ್ಬೊಬ್ಬರ ಹೇಳಿಕೆಯನ್ನು ಕೇಳಬೇಕಾಗಿತ್ತು. ಶವಸಂಸ್ಕಾರ ಮಾಡುವಂತೆ ತಮ್ಮ ಸಿಬ್ಬಂದಿಗಳಿಗೆ ಹೇಳಿದರೆಂದು ಸೇನಾನಾಯುಕರ ವಾದ. ಹಾಗೆ ಹೇಳಲೇ ಇಲ್ಲವೆಂದು ಒಬ್ಬ ಸಣ್ಣ ಅಧಿಕಾರಿಯೇ ಇವರಮೇಲೆ ವ್ಯವಹಾರವನ್ನು ಪ್ರೇರಿಸಿದನು.

೨. ಮಹಾಸಭೆಗೆ ಸೋಕ್ರಟೀಸನು ಅಧ್ಯಕ್ಷನಾಗಿದ್ದದ್ದು ಇದು ಒಂದೇ ಸಲ. ಆಥೆನ್ಸ್ ನಗರದಲ್ಲಿದ್ದ ೧೦ ಜಾತಿಗಳಿಂದ ಜಾತಿಗೆ ೫೦ರಂತೆ ಸದಸ್ಯತನವಿತ್ತು. ಒಂದೊಂದು ಜಾತಿಯವರು ಕಾರ್ಯಭಾರವನ್ನು ವರ್ಷದಲ್ಲಿ ೩೫ ದಿನ ವಹಿಸಬೇಕು. ಆದರಲ್ಲಿ ೧೦ ಜನರು ಅಧ್ಯಕ್ಷಸ್ಥಾನಕ್ಕೆ ಅರ್ಹರು. ದಿನಕ್ಕೊಬ್ಬರಂತೆ ಒಂದೊಂದು ವಾರಕ್ಕೂ ಪರ್ಯಾಯದಂತೆ ಅಧ್ಯಕ್ಷತೆಯನ್ನು ವಹಿಸ

ಹತ್ತು ಜನರನ್ನೂ ಒಟ್ಟುಗೂಡಿಸಿ ದಂಡನೆಯನ್ನು ವಿಧಿಸಲು ಪ್ರೇರಣೆ ಮಾಡಿದಾಗ ನಾನು ಅದು ಕೂಡದೆಂದು ತೀರ್ಮಾನವನ್ನು ಕೊಟ್ಟು ನಿಮ್ಮ ತೀರ್ಮಾನಕ್ಕೆ ವಿರೋಧವಾಗಿ ಮುಷ್ಕರ ಹಿಡಿದು ನಿಂತೆ ನಲ್ಲವೇ? ನೀವು ಮಾಡಿದುದು ನ್ಯಾಯವಿರುದ್ಧವೆಂದು ಅನಂತರ ನಿಮಗೇ ತಿಳಿಯಿತು. ಆದರೆ ಆಗ್ಗೆ ಇತರ ನ್ಯಾಯಾಧೀಶರೆಲ್ಲರೂ ನಿಮ್ಮೊಡನೆ ಸೇರಿ ಎಲ್ಲರೂ ನನ್ನಮೇಲೆ ಬಹಳ ಕೋಪಗೊಂಡು ನನ್ನನ್ನು ಆ ಅಗ್ರಸ್ಥಾನದಿಂದ ಓಡಿಸಿ ಸೆರೆಹಿಡಿಯಲು ಸಿದ್ಧವಾಗಿ ದ್ದರೂ ನಾನು ಅವುಗಳೆಲ್ಲವನ್ನೂ ಲಕ್ಷ್ಯಮಾಡದೆ ನ್ಯಾಯಾನು ಸಾರವಾಗಿ ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದೆನಲ್ಲವೇ? ಆ ಕಾಲದಲ್ಲಿ ಸೆರೆಯನ್ನಾದರೂ ಮರಣವನ್ನಾದರೂ ಕಂಡು ನಾನು ಭಯಪಡಲಿಲ್ಲ. ಅನಂತರ ಪ್ರಜಾಪ್ರಭುತ್ವಕ್ಕೆ ಕ್ರಾಂತಿಯುಂಟಾಗಿ ದೇಶದ ಆಡಳಿತವು ಪಲ್ಲಟವಾದಾಗ ಕಾರ್ಯಸೂತ್ರಗಳನ್ನು ಹಿಡಿದ ಮೂವತ್ತು ಜನರು ೧ ನನ್ನನ್ನೂ ಮತ್ತು ಇತರ ನಾಲ್ವರನ್ನೂ ಕರೆದು ಸಲಾಮಿಸ್ ನಗರದಿಂದ ಲಿಯಾರ್ ಎನ್ನುವನನ್ನು ಕರೆದುತರಬೇ ಕೆಂದು ಆಜ್ಞೆಮಾಡಿದರು. ಅವನನ್ನು ಕೊಲ್ಲಿಸಬೇಕೆಂದು ಈರೀತಿ ಅನ್ಯಾಯವಾದ ಆಜ್ಞೆಯನ್ನು ಮಾಡಿದರೆಂದು ತಿಳಿದು ಅನ್ಯಾಯ ದಲ್ಲಿ ನಾನು ಸಹಕರಿಸಲಾರೆನೆಂದು ಹೇಳಿ ಆ ಮೂವತ್ತುಜನರ ಆಕ್ರೋಶಕ್ಕೆ ಗುರಿಯಾಗಿ, ಅವರು ನನ್ನ ಪ್ರಾಣವನ್ನು ತೆಗೆಯಲೂ ಸಿದ್ಧರಾಗಿದ್ದರೂ ಅವರ ಆಜ್ಞೆಯನ್ನುಲ್ಲಂಘಿಸಿದೆನು. ಇತರ

---

ಬೇಕು. ಸೋಕ್ರಟೀಸನು ಅಧ್ಯಕ್ಷನಾಗಿದ್ದ ದಿನ ವ್ಯವಹಾರ ಅಕ್ರಮವೆಂದು ತಳ್ಳಿಹಾಕಿದನು. ಆದರೆ ಮರುದಿನ ಬೇರೊಬ್ಬರು ವಿಚಾರಣೆಯನ್ನು ಮುಂದು ವರಿಸಿದನು.

೧. ಕ್ರಿ. ಪೂ. ೪೦೪ರಲ್ಲಿ ಬಹಳ ದುರವಸ್ಥೆಯಾಗಿ ಸುಮಾರು ಒಂದು ವರ್ಷದ ಪರ್ಯಂತ ನಗರವು ೩೦ ಜನರ ಕೈಸೇರಿ ರಾಕ್ಷಸೀ ಆಡಳಿತಕ್ಕೆ ಒಳ ಗಾಯಿತು. ಕೊಲೆ, ಲೂಟಿ ಇವು ಸಾಮಾನ್ಯವಾಗಿ ನಡೆಸಲ್ಪಟ್ಟವು. ಈ ಆಡ ಳಿತದಲ್ಲಿ ಕ್ರಿಟಿಯಸ್ ಎಂಬ ಸೋಕ್ರಟೀಸನ ಹಿಂದಿನ ಶಿಷ್ಯನೂ ಇದ್ದುದರಿಂದ ಸೋಕ್ರಟೀಸನು ಶಿಕ್ಷೆಗೆ ಗುರಿಯಾಗಲಿಲ್ಲವೆಂದು ತೋರುತ್ತದೆ.

ನಾಲ್ವರು ಈ ಅನ್ಯಾಯಕ್ಕೆ ಒಪ್ಪಿ ಲಿಯನನನ್ನು ಕರೆತಂದರು. ಸರ್ವಾಧಿಕಾರವನ್ನೂ, ಸರ್ವಶಕ್ತರಾದ ಆ ಮೂವತ್ತು ಜನರ ಅಧಿಕಾರವನ್ನೂ ಧಿಕ್ಕರಿಸಿ ಅವರಿತ್ತ ಧರ್ಮಹೀನವಾದ ಆಜ್ಞೆಯನ್ನು ನೆರವೇರಿಸುವುದಿಲ್ಲವೆಂದು ಪ್ರತಿಭಟಿಸಿದೆನು. ಶೀಘ್ರದಲ್ಲಿಯೇ ಅವರ ಅಧಿಕಾರವೂ ಕ್ಷೀಣಹೊಂದಿ ಮತ್ತೆ ಪ್ರಜಾಪ್ರಭುತ್ವವು ನೆಲೆಗೊಂಡಿತು. ಇಲ್ಲದಿದ್ದರೆ ನನ್ನನ್ನು ಅವರು ಕೊಲ್ಲುತ್ತಲೇ ಇದ್ದರು. ಇದು ನಿಮ್ಮಲ್ಲಿ ಅನೇಕರಿಗೆ ಪ್ರತ್ಯಕ್ಷವಾಗಿ ತಿಳಿದವಿಷಯ.

ನನ್ನನ್ನು ಕ್ಷಮಿಸಿ ಎಂದಾಗಲಿ ನನ್ನ ಪಕ್ಷಕ್ಕೆ ತೀರ್ಮಾನವನ್ನು ಮಾಡಿ ಎಂದಾಗಲಿ ನಿಮ್ಮನ್ನು ನಾನು ಅಂಗಲಾಚಿ ಬೇಡಿಕೊಳ್ಳುವುದಿಲ್ಲ. ಹೀಗೆ ಬೇಡಿಕೊಳ್ಳುವುದು ಅಥೆನ್ಸ್ ನಗರದಲ್ಲಿ ಹುಟ್ಟಿದವರಿಗೆ ತಕ್ಕುದಲ್ಲ. ನೀವು ನ್ಯಾಯಾನುಸಾರವಾಗಿ ತೀರ್ಮಾನ ಮಾಡಬೇಕೇ ಹೊರತು ದಯದಾಕ್ಷಿಣ್ಯದಿಂದ ಏನೂ ಮಾಡಬಾರದು. ಹಾಗಿರಲು ನಾನೇತಕ್ಕೆ ನಿಮ್ಮನ್ನು ಅಂಗಲಾಚಿ ಬೇಡಿಕೊಳ್ಳಬೇಕು? ಧರ್ಮದಿಂದ ತಪ್ಪಬೇಡಿರಿ, ಎಂದು ನಿಮ್ಮನ್ನು ನಾನು ಬೇಡಿಕೊಳ್ಳುವವನಾಗಿರುವಾಗ ನನ್ನ ಮಕ್ಕಳಿಗೋಸ್ಕರವಾಗಿಯಾಗಲಿ ಕುಟುಂಬವನ್ನು ನೋಡಿಯಾಗಲಿ ನನ್ನನ್ನು ಬಿಡುಗಡೆ ಮಾಡಬೇಕೆಂದು ನಿಮ್ಮನ್ನು ಕೇಳಿಕೊಳ್ಳುವುದು ತಪ್ಪಾಗುವುದು. ಹಾಗೆ ಕೇಳಿಕೊಂಡರೆ ನಾನು ನಿಮ್ಮನ್ನು ಸತ್ಯದಿಂದ ಜಾರಿಹೋಗುವಂತೆ ಮಾಡಿದವನಾಗುವೆನು. ಆಗ್ಗೆ ನಾನು ದೈವದಲ್ಲಿ ನಂಬಿಕೆಯಿಲ್ಲದವನಾಗುವೆನು. ನಾನು ನಾಸ್ತಿಕನೆಂದು ನಾನೇ ಒಪ್ಪಿಕೊಂಡಂತಾಗುವುದು. ಮಹಾ ನಗರನಿವಾಸಿಗಳೇ! ನನ್ನನ್ನು ನಾಸ್ತಿಕನೆಂದು ಹೇಳುವುದು ಶುದ್ಧ ತಪ್ಪು. ನನ್ನಮೇಲೆ ತಪ್ಪನ್ನು ಹೊರಿಸುವವರಲ್ಲಿರುವ ದೈವಭಕ್ತಿಗಿಂತಲೂ ನನ್ನಲ್ಲಿ ಮಿಗಿಲಾದ ದೈವಭಕ್ತಿಯುಂಟು. ಬಹಳ ದೃಢವಾದ ಭಕ್ತಿಯಿಂದ ನಾನು ಈಶ್ವರನನ್ನು ನಂಬಿರುವೆನು. ನಿಮಗೂ ನನಗೂ ನಲ್ಮೆಯನ್ನು ಕೊಡುವ ದಾರಿಯನ್ನು ದೇವರು ತಿಳಿದಿರುವನು. ಆದುದರಿಂದ ದೇವರು ನಿಮಗೆ

ಬುದ್ಧಿಯನ್ನು ಕೊಟ್ಟು ಯಾವ ರೀತಿಯಲ್ಲಿ ತೀರ್ಮಾನ ಮಾಡು ವಂತೆ ಪ್ರೇರಿಸುತ್ತಾನೋ ಹಾಗೆಯೇ ಮಾಡಿರಿ.

(ಸಭಿಕರಲ್ಲಿ ೨೮೧ ಜನರು ಸೋಕ್ರಟೀಸನು ಅಪರಾಧಿ ಎಂದೂ, ೨೨೦ ಜನರು ನಿರಪರಾಧಿ ಎಂದೂ ಮತವನ್ನು ಕೊಟ್ಟರು. ಅನಂತರ ಅಪರಾಧಿ ಎಂದು ತೀರ್ಮಾನವಾದವನಿಗೆ ಏನು ದಂಡನೆ ಯನ್ನು ವಿಧಿಸಬೇಕು ಎನ್ನುವುದನ್ನು ಕುರಿತು ವಾದಿಯೂ ಅಪ ರಾಧಿಯೂ ವಾದಿಸುವುದು ಕ್ರಮ)

ಸೋಕ್ರಟೀಸನಿಗೆ ಮರಣದಂಡನೆಯನ್ನು ವಿಧಿಸಬೇಕೆಂದು ವಾದಿ ಮಾತನಾಡಿದನು. ಅನಂತರ ಸೋಕ್ರಟೀಸನೂ ಆ ವಿಷಯ ವಾಗಿ ಮಾತನಾಡಿದನು.

## ಸೋಕ್ರಟೀಸನ ವ್ಯಾಖ್ಯಾನ

### ೨

ಅಥೆನ್ಸ್ ಮಹಾನಗರ ನಿವಾಸಿಗಳೇ!

ನೀವು ಕೊಟ್ಟ ತೀರ್ಮಾನವನ್ನು ಕಂಡು ನಾನು ಮನಸ್ಸಿನಲ್ಲಿ ಆಯಾಸಪಡಲಿಲ್ಲ. ನಾನು ಅಪರಾಧಿಯೆಂದೇ ನೀವು ಹೇಳುವಿ ರೆಂದು ಮೊದಲೇ ತಿಳಿದಿದ್ದಿತು. ಈ ವಿಷಯದಲ್ಲಿ ನನಗೇನೂ ಆಶ್ಚರ್ಯವಿಲ್ಲ. ಆದರೆ ಇಷ್ಟು ಸ್ವಲ್ಪ ಜನರು ಮಾತ್ರವೇ ನನ್ನನ್ನು ಅಪರಾಧಿಯೆಂದು ಹೇಳಿದುದಕ್ಕೋಸ್ಕರ ವಿಸ್ಮಯವಾಗುತ್ತದೆ. ಮೂವತ್ತು ಜನಗಳು ಮಾತ್ರ ಬೇರೆಯ ರೀತಿಯ ಮತವನ್ನು ಕೊಟ್ಟಿ ದ್ದರೆ ತೀರ್ಪು ಬೇರೆಯ ರೀತಿಯೇ ಆಗುತ್ತಿರಲಿಲ್ಲವೇ? ಹೀಗಿರು ವಲ್ಲಿ ನನಗೆ ಮರಣದಂಡನೆಯನ್ನೇ ವಿಧಿಸಬೇಕೆಂದು ವಾದಿಸಿರುವ ದಷ್ಟೆ? ಬೇರೆ ದಂಡನೆಯನ್ನು ಸೂಚಿಸಬೇಕೆಂದು ಕೇಳಿರುವಿರಿ. ಬೇರೆ ಏನು ದಂಡನೆಯನ್ನು ನಾನು ಒಪ್ಪಿಕೊಳ್ಳಲಾದೀತು? ನನ್ನ

ಕಾರ್ಯಕ್ಕೆ ತಕ್ಕದ್ದೂ, ಸರಿತೂಗುವಂತಹದೂ ಆದ ದಂಡನೆಯನ್ನ ಲ್ಲವೇ ನನಗೆ ಕೊಡಬೇಕು? ಸುಖವಾಗಿ ಇಹಸೌಖ್ಯಗಳನ್ನನು ಭವಿಸಿಕೊಂಡಿರಲು ಸಮ್ಮತಿಸದೆ, ಜನಗಳು ಹೆಚ್ಚೆಂದು ಗಣಿಸುವ ಧನ, ಸಂಸಾರ ಸುಖ, ಸೈನ್ಯದ ಮತ್ತು ರಾಜ್ಯಾಂಗದ ದೊಡ್ಡ ಅಧಿ ಕಾರದ ಪದವಿಗಳು, ಸೌಧಗಳಮೇಲೆ ನಿಂತು ವ್ಯಾಖ್ಯಾನಗಳನ್ನು ಮಾಡಿ ಪ್ರಜಾಪ್ರಭುತ್ವದಲ್ಲಿ ಸಂಭಾವಿತನಾಗುವುದು, ನಗರದ ಕಕ್ಷಿಗಳಲ್ಲಿ ನಾಯಕತ್ವವನ್ನು ಹೊಂದುವುದು—ಇವುಗಳೆಲ್ಲವನ್ನೂ ಲಕ್ಷಿಸದೆ ತ್ಯಜಿಸಿರುವೆನು. ಇವುಗಳಲ್ಲಿ ನಾನು ಮನಸ್ಸನ್ನಾಗಲೀ ಸಾಹಸವನ್ನಾಗಲೀ ವಿನಿಯೋಗಿಸಿದ್ದರೆ, ನನ್ನ ಆತ್ಮೋನ್ನತಿಯಾಗು ವುದು ಹಾಗಿರಲಿ, ನಿಮಗೂ ನನ್ನಿಂದ ಯಾವ ವಿಧವಾದ ಉಪ ಯೋಗವೂ ಆಗುತ್ತಿರಲಿಲ್ಲ. ಆದುದರಿಂದ ದೊಡ್ಡ ಪದವಿಯನ್ನಾ ಗಲೀ, ಧನವನ್ನಾಗಲೀ ಅಪೇಕ್ಷಿಸದೆ, ನಿಮ್ಮಲ್ಲಿ ಪ್ರತಿಯೊಬ್ಬ ರಲ್ಲಿಯೂ ಹೋಗಿ ನಿಮಗೆ ನಿಜವಾದ ಅರಿವು ಹುಟ್ಟುವಂತೆ ಪ್ರಯಾಸಪಟ್ಟೆನು. ಜ್ಞಾನವೇ ದೊಡ್ಡ ವಸ್ತುವಾದುದರಿಂದ, ಇಂ ತಹ ಅಮೌಲ್ಯವಾದ ಉಪಕಾರವನ್ನು ಪ್ರತಿಯೊಬ್ಬನಿಗೂ ಮಾಡಲು ಪಾಡುಪಟ್ಟವನಿಗೆ ನ್ಯಾಯವಾಗಿ ಯಾವ ರೀತಿಯ ದಂಡನೆಯನ್ನು ವಿಧಿಸಬೇಕು? ನಾನು ಪ್ರತಿಯೊಬ್ಬನಿಗೂ "ನಿನ್ನ ಆಸ್ತಿಪಾಸ್ತಿ ಗಳನ್ನೂ ಇಹಸೌಖ್ಯಗಳನ್ನೂ ಕುರಿತು ಚಿಂತಿಸುವ ಮೊದಲು ನಿನ್ನ ಆತ್ಮವನ್ನು ಕುರಿತು ಸ್ವಲ್ಪ ಚಿಂತಿಸು" ಎಂದು ಹೇಳಿದೆನು. ಈ ರೀತಿಯಾದ ತಪ್ಪಿತವನ್ನು ಮಾಡಿದವನಿಗೆ ನೀವು ವಿಧಿಸಬೇಕಾದ ದಂಡನೆಯೇನೆಂದರೆ, ಹಾಗೆಯೇ ಮುಂದೆಯೂ ಮಾಡಲು ಅನು ಕೂಲವಾಗುವಂತೆ, ಯಥಾಸಾವಕಾಶವಾಗಿ, ಹೊಟ್ಟೆಬಟ್ಟೆಗಳ ಚಿಂ ತೆಯಿಲ್ಲದಂತೆ, ಜೀವನವನ್ನು ನಡೆಸಲು ಅವನಿಗೆ ರಾಜ್ಯದಲ್ಲೇ ಒಂದು ಮಾನ್ಯವನ್ನು ಕೊಡಬೇಕು. ರಥದ ಜೂಜಿನಲ್ಲಿಯೂ ಕುದುರೆ ಜೂಜಿನಲ್ಲಿಯೂ ಗೆದ್ದವರಿಗೆ ಈ ರೀತಿಯ ಮಾನ್ಯವನ್ನು ಕೊಟ್ಟು ಗೌರವಿಸುತ್ತಿರುವಿರಿ. ಅದಕ್ಕಿಂತಲೂ ಈರೀತಿ ನಿಮ್ಮ ನಿಜವಾದ ಶ್ರೇಯಸ್ಸಿಗಾಗಿ ಪ್ರಯಾಸಪಟ್ಟ ಬಡವನಿಗೆ ಈ ವ್ಯವಸ್ಥೆಯನ್ನು

ಮಾಡುವುದೇ ಧರ್ಮವು. ಇಂತಹ ದಂಡನೆಯನ್ನೇ ನಾನು ಸೂಚಿಸುವೆನು.

ಈ ರೀತಿಯಲ್ಲಿ ಹೇಳುವುದರಿಂದ ನಾನು ಅಹಂಭಾವದಿಂದ ಮಾತನಾಡುವೆನೆಂದು ನೀವು ಭಾವಿಸಬಹುದು. ಆಥೆನ್ಸ್ ಮಹಾನಗರ ನಿವಾಸಿಗಳೆ! ಹಾಗಲ್ಲ. ನಾನು ತಿಳಿದು ತಿಳಿದೂ ಯಾವನಿಗಾಗಲೀ ಒಂದು ಕೇಡನ್ನೂ ಮಾಡಿಲ್ಲ. ಹೀಗಿರುವಾಗ ನಾನು ಬೇರೆಯ ರೀತಿಯಲ್ಲಿ ಹೇಗೆ ಮಾತನಾಡಿಯೇನು? ನನ್ನ ಮನಸ್ಸಿನಲ್ಲಿ ನಾನು ನಿರಪರಾಧಿ ಎಂದು ತಿಳಿದಿರುವಂತೆ ನಿಮಗೂ ತೋರಿಸಿಕೊಡಲು ಪ್ರಮಾಣಗಳನ್ನು ಎತ್ತಿ ತೋರಿಸಲು ಬೇಕಾಗುವಷ್ಟು ಅವಕಾಶವಿಲ್ಲ. ಕೆಲವು ರಾಜ್ಯಗಳಲ್ಲಿ ಮರಣ ದಂಡನೆಯನ್ನು ವಿಧಿಸುವ ವ್ಯವಹಾರಗಳನ್ನು ಒಂದೇ ದಿನದಲ್ಲಿ ಮುಗಿಸಿಬಿಡಬಾರದೆಂದು ನಿಯಮವಿರುತ್ತದೆ. ನಮ್ಮ ನಗರದಲ್ಲಿಯೂ ಅಂತಹ ನಿಯಮವಿದ್ದಿದ್ದರೆ ಪ್ರಾಯಶಃ ನಾನು ನಿರಪರಾಧಿ ಎಂದು ನಿಮ್ಮ ಮನಸ್ಸಿಗೆ ತೃಪ್ತಿಯಾಗುವಂತೆ ನಿರೂಪಿಸಬಹುದಾಗಿತ್ತು.

ನನಗಿರುವ ಸ್ವಲ್ಪಾವಧಿಯಲ್ಲಿ ನನ್ನ ವಿರೋಧಿಗಳು ನನ್ನ ಮೇಲೆ ಹೊರಿಸಿರುವ ದೊಡ್ಡ ಆರೋಪಣೆಗಳನ್ನು ಕಳೆದುಕೊಳ್ಳಲು ಅವಕಾಶವು ಸಾಲದು. ಆದರೂ ನನ್ನ ಮನಸ್ಸಾಕ್ಷಿಯಾಗಿ ನಾನು ಯಾವ ಅಪರಾಧವನ್ನೂ ಮಾಡದಿರಲು ಹೇಗೆ ನನಗೆ ನಾನೇ ದಂಡನೆಯನ್ನು ಸೂಚಿಸಿಕೊಳ್ಳುವುದು! ಮರಣವೆಂದರೆ ನನಗೆ ಹೆದರಿಕೆಯಿಲ್ಲ. ಈ ದೇಹದಿಂದ ನನ್ನ ಪ್ರಾಣವು ಹೋಗುವುದು; ಸುಖವನ್ನು ಕೊಡುವುದೋ ದುಃಖವನ್ನು ಕೊಡುವುದೋ ಎನ್ನುವುದನ್ನು ನಾನು ತಿಳಿಯದೇ ಇರುವಾಗ ಪರೋಕ್ಷ ದುಃಖಕ್ಕೆ ಬದಲಾಗಿ ಪ್ರತ್ಯಕ್ಷ ದುಃಖವೊಂದನ್ನು ಬಯಸಿ 'ಮರಣಕ್ಕೆ ಬದಲಾಗಿ ಬೇರೆ ದಂಡನೆಯನ್ನು ಕೊಡಿರಿ' ಎಂದು ಏತಕ್ಕೆ ಕೇಳಬೇಕು? ಮರಣ ದಂಡನೆಯು ಬೇಡದಿದ್ದರೆ ಕಾರಾಗೃಹವಾಸಕ್ಕೆ ಒಪ್ಪಿಕೊಳ್ಳಲೇ? ಏತಕ್ಕೆ ನನ್ನ ಆಯುಸ್ಸನ್ನು ಕಾರಾಗೃಹಕ್ಕೆ ಬರುವ ಪ್ರತಿಯೊಬ್ಬ

ಅಧಿಕಾರಿಗೂ ಗುಲಾಮನಾಗಿ ಕಳೆದು ಬದುಕಬೇಕು? ಇದು ಮರಣಕ್ಕಿಂತಲೂ ಒಳ್ಳೆಯದೆಂದು ಹೇಗೆ ಭಾವಿಸಲಾದೀತು? ಜುಲ್ಮಾನೆಯನ್ನು ಸೂಚಿಸು ಎಂದರೆ ತಕ್ಕ ಜುಲ್ಮಾನೆಯನ್ನು ಸೂಚಿಸಿ ಹೇಳುವ ಶಕ್ತಿ ನನಗಿಲ್ಲ. ಕಾರಾಗೃಹದಲ್ಲಿಯೇ ನಾನು ವಾಸಿಸ ಬೇಕಾಗುವುದು. ನಗರಭ್ರಷ್ಟನನ್ನಾಗಿ ಮಾಡಿ ಎಂದರೆ, ಆ ಸೂಚ ನೆಗೆ ನೀವು ಒಪ್ಪಬಹುದು. ಸಹೋದರರೇ, ನನ್ನ ಪ್ರಾಣವನ್ನು ಹೇಗಾದರೂ ಉಳಿಸಿಕೊಳ್ಳಬೇಕೆಂಬ ಆಶೆಯು ನನಗಿಲ್ಲ. ನನ್ನ ಊರಿನವರಾದ ನಿಮಗೇ ನಾನು ಹೇಳುವುದೂ ಪರೀಕ್ಷಿಸುವುದೂ ಸಹಿ ಸದಿರುವಾಗ ಬೇರೆ ಊರಿನವರಿಗೆ ಸಹಿಸುವುದೇ? ನನ್ನ ಪ್ರಶ್ನೆ ಗಳನ್ನೂ ಶೋಧನೆಗಳನ್ನೂ ಸಹಿಸದೆ ನೀವು ನನ್ನನ್ನು ಊರುಬಿಟ್ಟು ಹೋಗೆಂದು ಅಟ್ಟಿದಮೇಲೆ ಇನ್ನು ಉಳಿದಿರುವ ಆಯುಸ್ಸನ್ನು ಊರೂರು ತಿರುಗಿ ಕಳೆಯಲು ಮುದುಕನಾದ ನನಗೆ ಮನಸ್ಸು ಒಪ್ಪದು. ನಾನು ಯಾವೂರಿಗೆ ಹೋದರೂ ಜನಗಳಿಗೆ ಇದೇ ರೀತಿ ಯಾದ ಪ್ರಶ್ನೆಗಳನ್ನು ಹಾಕಬೇಕು. ಇದೇ ರೀತಿಯಲ್ಲಿ ಆತ್ಮ ಶೋಧನೆಯನ್ನು ಮಾಡಬೇಕು. ಇದು ನಿಮಗೆ ಹೇಗೆ ಜುಗುಪ್ಸೆಯ ನ್ನುಂಟುಮಾಡಿತೋ ಹಾಗೆಯೇ ಎಲ್ಲಾ ಊರಿನವರಿಗೂ ಬೇಸರಿಕೆ ಯನ್ನುಂಟುಮಾಡುವುದು. ನನ್ನ ಪ್ರಾಣವನ್ನು ಉಳಿಸಿಕೊಳ್ಳಲು ನಾನು ಏತಕ್ಕೆ ಸ್ವಂತ ಊರನ್ನು ಬಿಟ್ಟು ಭ್ರಷ್ಟನಾಗಿ ಊರೂರು ಅಲೆಯಬೇಕು?

ಬೇರೆ ದೇಶಕ್ಕೆ ಹೋಗಿ ಈರೀತಿ ಆತ್ಮಶೋಧನೆಯನ್ನು ಮಾಡದೆ ಸುಮ್ಮನೆ ಸುಖವಾಗಿರಬಹುದಲ್ಲಾ ಎಂದು ನೀವು ಹೇಳಬಹುದು. ನಾನು ಸುಮ್ಮನೆ ಇರಲಾರೆನೆಂದು ಹೇಳಿದರೆ ನೀವು ನಂಬಲಾರಿರಿ. ಇದೇ ನನ್ನ ದೌರ್ಭಾಗ್ಯ. ನಾನು ಈಶ್ವರಾಜ್ಞೆಗೆ ವಿರೋಧವಾಗಿ ನಡೆಯುವುದು ಹೇಗೆ, ಎಂದು ಹೇಳಿದರೆ ಇವನು ಲಾಘವವಾಗಿ ಮಾತನಾಡುತ್ತಾನೆಂದು ನೀವು ಅಸಡ್ಡೆ ಮಾಡುವಿರಿ. ನನ್ನನ್ನು ನಂಬಲಾರಿರಿ. ಧರ್ಮ ಮತ್ತು ನಿಜ ಕರ್ತವ್ಯಗಳನ್ನು ಕುರಿತು ಸಂ ಭಾಷಿಸಿ ಇತರರೊಡನೆ ತಾನೂ ಆತ್ಮಜ್ಞಾನವನ್ನು ಹೊಂದುವುದ

ಕ್ಕಿಂತ ಬೇರೆಯರೀತಿಯ ಜೀವನವು ಮನುಷ್ಯನಿಗೆ ಬೇಕಾಗಿಲ್ಲ. ಹಾಗೆ ಮಾಡುವುದಕ್ಕೆ ಅವಕಾಶವಿಲ್ಲದಿರುನಾಗ ಪ್ರಾಣವನ್ನೇ ಬಿಡುವುದು ಒಳ್ಳೆಯದೆಂದು ನಾನು ಹೇಳಿದರೆ ಅದನ್ನೂ ನಂಬಲಾರಿರಿ. ಇದಕ್ಕೆ ನಾನೇನು ಮಾಡಲಾದೀತು?

ನಾನು ಧನಿಕನಾಗಿದ್ದರೆ ನನ್ನ ಆಸ್ತಿಯನ್ನೆಲ್ಲಾ ಅಪರಾಧ ಕಾಣಿಕೆಯಾಗಿ ಕೊಡಲು ಸಂತೋಷದಿಂದ ಒಪ್ಪುತ್ತಿದ್ದೆನು. ಇಹ ವಸ್ತುಗಳನ್ನು ಕಳೆದುಕೊಳ್ಳುವುದರಿಂದ ನನಗೆ ಯಾವ ರೀತಿಯ ದುಃಖವೂ ಉಂಟಾಗದು. ಆದರೆ ನಾನು ಬಡವನು. ಅಪರಾಧ ಕಾಣಿಕೆಯನ್ನು ಕೊಡಲಶಕ್ತನು. ನನ್ನ ಶಕ್ತಿಗೆ ತಕ್ಕಂತೆ ಅಪರಾಧವನ್ನು ವಿಧಿಸಿದರೆ ಕೊಡುವೆನು. ಒಂದು 'ಮಿನಾ'* ಅಪರಾಧವನ್ನು ಹಾಕುವಿರೇನು? ಅಷ್ಟು ಬೇಕಾದರೆ ಕೊಡುವೆನು. ಇಲ್ಲ ಇಲ್ಲಿರುವ ನನ್ನ ಗೆಳೆಯರು ಮೂವತ್ತು 'ಮಿನಾ' ಗಳನ್ನು ಹಾಕಬಹುದೆಂದು ಸೂಚಿಸುವಂತೆ ಹೇಳುವರು. ಅದಕ್ಕೆ ಅವರು ಜಾಮೀನು ಕೊಡುವರು.

(ಮರಣದಂಡನೆಯು ವಿಧಿಸಲ್ಪಟ್ಟಿತು. ಮತ್ತೆ ಸೋಕ್ರಟೀಸನು ವ್ಯಾಖ್ಯಾನ ಮಾಡಿದನು)

## ಸೋಕ್ರಟೀಸನ ವ್ಯಾಖ್ಯಾನ

### ೩

ಆಥೆನ್ಸ್ ಮಹಾನಗರ ನಿವಾಸಿಗಳೇ!

ನನಗೆ ನೀವು ಮರಣದಂಡನೆಯನ್ನು ವಿಧಿಸಿರುವಿರಿ. ಆದರೆ ಅದರಿಂದ ನಿಮಗೆ ಅಧಿಕ ಲಾಭವಿಲ್ಲ. ನನ್ನಿಂದ ತಪ್ಪಿಸಿಕೊಳ್ಳಲು

---

* ಒಂದು 'ಮಿನಾ' ಎಂದರೆ ಸುಮಾರು ಅರವತ್ತು ರೂಪಾಯಿ ಬೆಲೆಯಿದ್ದ ಗ್ರೀಕರ ನಾಣ್ಯ.

ನೀವು ನನಗೆ ಮರಣದಂಡನೆಯನ್ನು ವಿಧಿಸದಿದ್ದರೂ ಶೀಘ್ರಕಾಲ ದಲ್ಲಿಯೇ ನನ್ನ ಆಯಸ್ಸು ಸ್ವಾಭಾವಿಕವಾಗಿ ಮುಗಿದುಹೋಗಿ ಮರ ಣವು ಸಮಿಾಪಿಸುತ್ತಿತ್ತು. ಆದರೆ ನೀವು ನನಗೆ ವಿಧಿಸಿರುವ ಅನ್ಯಾ ಯವಾದ ದಂಡನೆಯಿಂದ ನೀವು ತೀರದ ದೂರಿಗೆ ಗುರಿಯಾಗಿರು ವಿರಿ. ಇನ್ನು ಅಥೆನ್ಸ್‌ನಗರವನ್ನು ನಿಂದಿಸಬೇಕೆನ್ನುವವರೆಲ್ಲರೂ 'ಸೋಕ್ರಟೀಸನು ಜ್ಞಾನಿ. ಅವನನ್ನು ಅನ್ಯಾಯವಾಗಿ ಅಥೆನ್ಸ್ ನಗರದವರು ಕೊಂದರು' ಎಂದು ಮುಂದೆ ಯಾವಾಗಲೂ ದೂರು ವರು. ನಾನು ಜ್ಞಾನವನ್ನು ಹೊಂದದಿದ್ದರೂ ನಿಮ್ಮನ್ನು ದೂರುವುದ ಕ್ಕೋಸ್ಕರವೇ ನಾನು ಜ್ಞಾನಿಯೆಂದೂ, ನೀವು ಅನ್ಯಾಯವಾಗಿ ನನ್ನನ್ನು ಕೊಂದಿರೆಂದೂ ಜನರು ಆಡಿಕೊಳ್ಳುವರು. ಕೆಲವು ದಿನ ನೀವು ತಾಳ್ಮೆಯಿಂದಿದ್ದಿದ್ದರೆ ನಾನು ಸಹಜವಾಗಿಯೇ ಸಾಯುತ್ತಿ ದ್ದೆನು. ನಿಮಗೆ ನನ್ನಿಂದಾಗುವ ತೊಂದರೆಯು ತಪ್ಪುತ್ತಿದ್ದಿತು. ನಾನು ಬೇಕಾದಷ್ಟು ಕಾರಣಗಳನ್ನು ತೋರಿಸದೇ ಇದ್ದುದರಿಂದಲೂ ಸರಿಯಾದ ವಾದವನ್ನು ಹೂಡದೇ ಇದ್ದುದರಿಂದಲೂ ಶಿಕ್ಷೆಗೆ ಗುರಿ ಯಾಗಿರುವೆನೆಂದು ಕೆಲವರು ಭಾವಿಸಬಹುದು. ಹಾಗಲ್ಲ. ನಾನು ರೀತಿಗೆಟ್ಟು ಮಾತನಾಡಲಿಲ್ಲವಾದಕಾರಣ ದಂಡನೆಗೆ ಗುರಿಯಾಗಿರು ವೆನು. ಅದಕ್ಕೆ ಮರುಗುವುದು ಅನುಚಿತ. ಅತ್ತೂ, ಕರೆದೂ, ಅಂಗಲಾಚಿ ಬೇಡಿಕೊಂಡು ಇತರರಂತೆ ತಕ್ಕುದಲ್ಲದ ರೀತಿಯಲ್ಲಿ ನಡೆದುಕೊಂ ಡಿದ್ದರೆ ನಾನು ತಪ್ಪಿಸಿಕೊಂಡಿರಬಹುದಾಗಿತ್ತು. ಆದರೆ ಅವು ನನಗೆ ಯೋಗ್ಯವಲ್ಲವೆಂದು ನಾನು ದೂರ ನಿಂತೆನು. ಸತ್ಪುರುಷನೂ ವೀರನೂ ಆದವನು ಮರಣಕ್ಕೆ ಭಯಪಟ್ಟು ರೀತಿಗೆಟ್ಟ ನಡತೆಯಿಂದ ಪ್ರಾಣವನ್ನು ಉಳಿಸಿಕೊಳ್ಳಬೇಕಾಗಿಲ್ಲ. ಯುದ್ಧರಂಗದಲ್ಲಿ ಹೇಗೆಯೋ ಹಾಗೆಯೇ ನ್ಯಾಯಸ್ಥಾನದಲ್ಲಿಯೂ ನಡೆದುಕೊಳ್ಳ ಬೇಕು. ಶತ್ರುವಿನಿಂದ ಸೋತುಹೋಗುವ ಸಮಯದಲ್ಲಿ ಆಯುಧ ಗಳನ್ನು ಕೆಳಗೆ ಹಾಕಿ ಶತ್ರುವಿನ ಕಾಲಿನಮೇಲೆ ಬಿದ್ದು ಪ್ರಾಣವನ್ನು 'ರಕ್ಷಿಸು' ಎಂದು ಬೇಡಿಕೊಂಡರೆ ಯುದ್ಧರಂಗದಿಂದ ಪ್ರಾಣದೊ ಡನೆ ತಪ್ಪಿಸಿಕೊಳ್ಳಬಹುದು. ಅದು ಹೇಗೆ ತಕ್ಕುದಲ್ಲವೋ ಹಾಗೆಯೇ

ಮಾನ, ಧೈರ್ಯ, ಧರ್ಮಗಳನ್ನು ಬಿಟ್ಟು ಅಪಾಯಗಳಿಂದ ತಪ್ಪಿಸಿಕೊಂಡು ಬದುಕುವುದೂ ಧರ್ಮವಲ್ಲ. ಅದು ಸಾಧ್ಯವೇನೋ ಹೌದು. ಆದರೆ ಅದು ಮಾನ್ಯವಲ್ಲ. ಮರಣವನ್ನು ಕಂಡು ಅಂಜಬೇಕಾಗಿಲ್ಲ. ಅಧರ್ಮವೇ ಮನುಷ್ಯನಿಗೆ ಆಪತ್ತು. ನಾನು ಮರಣವನ್ನು ಇವತ್ತೋ ನಾಳೆಯೋ ಎಂದು ಇದಿರುನೋಡುತ್ತಲೇ ಇದ್ದೆನು. ಅದು ನನಗೆ ಮುಪ್ಪಿನ ಕಾಲದಲ್ಲಿ ಸ್ವಲ್ಪ ಮುಂಚಿತವಾಗಿಯೇ ಬಂದಿದೆ. ಆದರೆ ಯಾರು ನನ್ನಮೇಲೆ ಹಗೆಯನ್ನು ಸಾಧಿಸಿ ನನ್ನನ್ನು ನ್ಯಾಯಸ್ಥಾನಕ್ಕೆ ಎಳೆತಂದು ನನಗೆ ಮರಣವನ್ನು ವಿಧಿಸಿದರೋ ಅವರನ್ನು ಅಧರ್ಮವು ಬಲವಾಗಿ ಹಿಡಿದುಕೊಂಡಿದೆ. ಅವರಿಗೆ ಸಂಭವಿಸತಕ್ಕದ್ದು ದೊಡ್ಡ ದುಃಖವೇ ಹೊರತು ನನಗೆ ಸಂಭವಿಸತಕ್ಕದ್ದು ದುಃಖವಾಗಲಾರದು. ನನಗೆ ವಿಧಿಸಿದ ಮರಣದಂಡನೆಯನ್ನು ಅನುಭವಿಸಲು ನಾನು ಹೋಗುವೆನು. ಅವರೂ ತಾವು ಮಾಡಿರುವ ಅಧರ್ಮಗಳಿಗೂ ಪಾಪಗಳಿಗೂ ತಪ್ಪದೆ ಶಿಕ್ಷೆಯನ್ನು ಅನುಭವಿಸುತ್ತಾರೆ. ಈಶ್ವರಾಜ್ಞೆಯಿಂದ ಈರೀತಿ ನಡೆದುದರಲ್ಲಿ ಯಾವ ತಪ್ಪೂ ಇಲ್ಲ. ಸತ್ಯವೇ ಉಳಿಯುವುದು ಎಂಬ ಮಾತು ಸತ್ಯವಾಗಿದೆ

ಮಹಾನಗರನಿವಾಸಿಗಳೇ !

ಮರಣವನ್ನು ಎದುರು ನೋಡುತ್ತಾಹೋಗುವಾಗ ನಾನು ನಿಮಗೆ ಹೇಳುವೆನು ಕೇಳಿ. ನಾನು ಸತ್ತಮೇಲೆ ನನಗೆ ನೀವು ಕೊಟ್ಟಿರುವ ಶಿಕ್ಷೆಗಿಂತಲೂ ಹತ್ತರಷ್ಟು ಕಠಿಣವಾದ ಶಿಕ್ಷೆಯನ್ನು ನೀವು ಅನುಭವಿಸುವಿರಿ. ನೀವು ಆತ್ಮಧರ್ಮವನ್ನು ಮರೆತು ಜೀವಮಾನವನ್ನು ವೃಥಾ ಕಳೆಯುತ್ತಿದ್ದೀರಿ ಎಂದು ನಾನು ನಿಮ್ಮನ್ನು ಶೋಧನೆಗೆ ಗುರಿಮಾಡಲು ಆ ಜುಗುಪ್ಸೆಯಿಂದಲ್ಲವೇ ನೀವು ನನ್ನಿಂದ ತಪ್ಪಿಸಿಕೊಳ್ಳಲು ಮರಣದಂಡನೆಯನ್ನು ವಿಧಿಸಿರುವಿರಿ ! ಆದರೆ ಇಷ್ಟು ಸುಲಭವಾಗಿ ಆ ಶೋಧನೆಯಿಂದ ತಪ್ಪಿಸಿಕೊಳ್ಳಲಾರಿರಿ. ನಾನಿದ್ದವರೆಗೂ ಮುಂದೆ ಬಾರದಿದ್ದ ಅನೇಕರು ನಾನು ಹೋದೊಡನೆಯೇ ಈಚೆಗೆ ಬಂದು ನಿಮ್ಮನ್ನು

ನಾನು ಮಾಡಿದುದಕ್ಕಿಂತಲೂ ಬಹಳ ಕಠಿಣವಾದ ಶೋಧನೆಗೆ ಗುರಿ ಮಾಡುವರು. ಅವರು ಈಗ ಹುಡುಗರಾಗಿರುವರು. ಅವರನ್ನು ನೀವು ಎದುರಿಸಿ ಜಯಿಸುವುದಕ್ಕಾಗುವುದಿಲ್ಲ. ನೀತಿಗೆಟ್ಟು ಬಾಳುವ ಜನರು ಜ್ಞಾನಿಗಳ ದೂರಿನಿಂದ ತಪ್ಪಿಸಿಕೊಳ್ಳಬೇಕಾದರೆ ಅವರ ಮಾರ್ಗವು ಜ್ಞಾನಿಗಳನ್ನು ಕೊಲ್ಲುವುದರಿಂದ ಸುಗಮವಾಗಲಾರದು. ಧರ್ಮವನ್ನು ತಿಳಿದು ಸನ್ಮಾರ್ಗದಲ್ಲಿ ನಡೆಯುವುದೇ ಉಪಾಯ.

ನಾನು ನಿರಪರಾಧಿ ಎಂದು ಮತವನ್ನು ಕೊಟ್ಟವರಿಗೂ ಕೆಲವು ಮಾತನ್ನು ಹೇಳಲು ಅವರನ್ನು ಪ್ರಾರ್ಥಿಸುವೆನು. ನನಗೆ ಸಂಭವಿಸಿರುವ ಮರಣವು ನನ್ನ ಹಿತಕ್ಕಾಗಿಯೇ ಇರಬೇಕೆಂದು ಸಂಪೂರ್ಣವಾದ ನಂಬಿಕೆಯಿದೆ. ಏತಕ್ಕೆಂದರೆ ನನಗೆ ಯಾವಾಗಲೂ ದೇವರ ನುಡಿಯೊಂದು ನಾನು ಮಾಡಬಾರದ ಕೆಲಸದಲ್ಲಿ ಪ್ರವೇಶಿಸಿದಾಗ "ಬೇಡ" ಎಂದು ಎಚ್ಚರಿಕೆ ಕೊಡುವುದುಂಟು. ನನ್ನ ಮನಸ್ಸಿನಲ್ಲಿ ಅಂತರ್ಯಾಮಿಯಾಗಿ ನಿಂತು ಈಶ್ವರನು ನನಗೆ ನುಡಿದ ಮಾತು ಒಂದುಸಾರಿಯೂ ತಪ್ಪಾಗಲಿಲ್ಲ. ಇದುವರೆಗೂ ಸಣ್ಣ ಮತ್ತು ದೊಡ್ಡ ಪ್ರತಿಯೊಂದು ವಿಷಯದಲ್ಲಿಯೂ ಅದು ನನಗೆ ನೆರವಾಗಿ ಕಾಯುತ್ತಿರುವುದು. ಈ ಹೊತ್ತು ಬೆಳಗ್ಗೆ ನ್ಯಾಯಸ್ಥಾನಕ್ಕೆ ಬಂದ ಕಾಲದಲ್ಲಿಯಾಗಲಿ, ನಿಮ್ಮ ಮುಂದೆ ಮಾತನಾಡಿದ ವೇಳೆಯಲ್ಲಿಯಾಗಲೀ ಅದು ನನ್ನನ್ನು ತಡೆಯಲೇ ಇಲ್ಲ. ಹಿಂದೆ ಅನೇಕ ವೇಳೆ ನಾನು ತಪ್ಪು ಮಾತನ್ನು ಹೇಳಲುಪಕ್ರಮಿಸಿದಾಗ ಅದು ನನ್ನನ್ನು 'ಬೇಡ' ಎಂದು ತಡೆಯುತ್ತಿತ್ತು. ಆದರೆ ಈ ವಿಷಯದಲ್ಲಿ ನಾನು ಆಡಿದ, ಮಾಡಿದ ಯಾವುದೊಂದರಲ್ಲಿಯೂ ಅದು ನನಗೆ ಅಡ್ಡಬರಲಿಲ್ಲ. ಆದುದರಿಂದ ನಾನು ತಿಳಿಯುವುದೇನಂದರೆ, ಈ ಮರಣವನ್ನು ನನ್ನ ಕ್ಷೇಮಕ್ಕಾಗಿಯೇ ಈಶ್ವರನು ನನಗೆ ತೋರಿಸಿರುವನು. ಮರಣವು ಜನಗಳೆಣಿಸುವಂತೆ ನಿಜವಾಗಿಯೂ ಒಂದು ದೊಡ್ಡ ಅನಿಷ್ಟವಾಗಿದ್ದರೆ ನನ್ನೊಳಗೆ ವಾಸಿಸುವ ದೇವರು ನನ್ನನ್ನು 'ಬೇಡ' ಎಂದು ತಡೆಯುತ್ತಿದ್ದನು. ಬೇರೆಯ ರೀತಿಯಲ್ಲಿ ವಿಚಾರ ಮಾಡಿ ನೋಡಿರಿ. ನಾವು ಮರಣವನ್ನು ಏತಕ್ಕೆ ಅನಿಷ್ಟ

ವೆಂದು ಭಾವಿಸಬೇಕು ? ಯಾರಾದರೂ ಸತ್ತರೆಂದರೆ ಎರಡರಲ್ಲಿ ಒಂದಾಗಬೇಕು. ಮನುಷ್ಯನು ದೇಹದೊಡದೆ ನಾಶವಾದರೆ ಸುಖದುಃಖ ಯಾವುದೂ ಇಲ್ಲದ ಶೂನ್ಯವಾದ ಸ್ಥಿತಿಗೆ ಹೋಗಬೇಕು. ಕನಸೇ ಇಲ್ಲದ, ಆನಂದಮಯವಾದ ಗಾಢನಿದ್ರೆಯನ್ನು ಹೋಲುವ ಅವಸ್ಥೆಯನ್ನು ಹೊಂದಬೇಕು. ಹೀಗಾದರೆ ಮರಣವನ್ನು ಏತಕ್ಕೆ ಅನಿಷ್ಟವೆನ್ನಬೇಕು ? ಅಥವಾ—ಸನಾತನವಾಗಿ ನಾವು ನಂಬಿರುವಂತೆ ಮರಣವು ಬಂದ ಕಾಲದಲ್ಲಿ ಆತ್ಮವು ಬೇರೆ ಲೋಕಕ್ಕೆ ಹೋಗುತ್ತದೆ. ಇದುವರೆಗೂ ಸತ್ತಿರುವ ಮಹನೀಯರೆಲ್ಲರೂ ಇರುವ ಸ್ಥಳಕ್ಕೆ ನಾವು ಹೋಗುವುದಾದರೆ ಅದನ್ನೇಕೆ ಅನಿಷ್ಟವೆನ್ನಬೇಕು ? ನಮ್ಮ ಪೂರ್ವಿಕರೆಲ್ಲರನ್ನೂ ನಾವು ಸಮಕ್ಷಮ ಕಾಣುವುದೂ ಮಾತನಾಡಿಸುವುದೂ ಎಂತಹ ದೊಡ್ಡ ಭಾಗ್ಯ ! ಇದನ್ನು ಒದಗಿಸುವ ಮರಣವನ್ನು ಏತಕ್ಕೆ ಒಂದು ದೊಡ್ಡ ದುಃಖವೆಂದೆಣಿಸಬೇಕು? ನಮಗೆ ಹಿಂದೆ ಜೀವಿಸಿದ ಮಹನೀಯರೊಡನೆ ಸಂಭಾಷಿಸಿ, ಜ್ಞಾನವೃದ್ಧಿಯನ್ನು ಮಾಡಿಕೊಳ್ಳುವುದು ಒಂದು ದೊಡ್ಡ ಭಾಗ್ಯವೆಂದೇ ನಾನು ಎಣಿಸುತ್ತೇನೆ.

ನನ್ನ ಗೆಳೆಯರೇ ! ನಿಮಗೆ ಮರಣವು ಸಂಭವಿಸಿದಾಗ ನೀವೂ ಧೈರ್ಯದಿಂದಿರಿ. ಸತ್ಪುರುಷನಿಗೆ ಒಂದು ಕಾಲದಲ್ಲಿಯೂ ಕೇಡು ಸಂಭವಿಸದು, ಎಂಬುದನ್ನು ದೃಢವಾಗಿ ನಂಬಿರಿ. ಧರ್ಮವನ್ನು ನಂಬಿದವನಿಗೆ ಇಹದಲ್ಲಿಯಾಗಲೀ ಪರದಲ್ಲಿಯಾಗಲೀ ಒಂದು ದುಃಖವೂ ಬಾರದಂತೆ ನೋಡಿಕೊಂಡು ಈಶ್ವರನು ಸಂರಕ್ಷಿಸುವನು. ಈಗ ನಾನು ಈ ಲೋಕದಿಂದ ವಿಮೋಚನೆಯನ್ನು ಹೊಂದುವುದು ನನಗೆ ಶುಭವೆಂದು ಸಂಕಲ್ಪಮಾಡಿಯೇ ಈಶ್ವರನು ಮರಣವನ್ನು ಅನುಗ್ರಹಿಸಿರುವನು. ಆದುದರಿಂದ ನನಗೆ ವಿರೋಧವಾಗಿ ವಾದಿಸಿದವರ ಮೇಲಾಗಲಿ, ದಂಡನೆಯನ್ನು ವಿಧಿಸಿದವರ ಮೇಲಾಗಲೀ ನನಗೆ ಕೋಪವಿಲ್ಲ. ಅವರು ಒಳ್ಳೆಯದನ್ನು ಬಯಸಿ ಮರಣದಂಡನೆಯನ್ನು ವಿಧಿಸಲಿಲ್ಲ ; ದುರಭಿಪ್ರಾಯದಿಂದ ವಿಧಿಸಿದರು ಎಂದು

ಅವರ ವಿಷಯದಲ್ಲಿ ದೋಷವನ್ನು ತಿಳಿಸಬಹುದೇ ಹೊರತು ನನಗೆ ಅವರಮೇಲೆ ಯಾವ ವಿಧವಾದ ಮನಸ್ತಾಪವೂ ಇಲ್ಲ.

ಒಂದು ಮಾತ್ರ ನಾನು ಕೇಳಿಕೊಳ್ಳುವೆನು. ನನ್ನ ಮಕ್ಕಳು ಬೆಳೆದು ಪ್ರಾಪ್ತವಯಸ್ಕರಾದ ಮೇಲೆ ಅವರು ಇಹವಿಷಯಗಳನ್ನಾಗಲೀ ಅಥವಾ ಬೇರೆ ಯಾವುದನ್ನಾಗಲೀ ಧರ್ಮಕ್ಕಿಂತ ದೊಡ್ಡದೆಂದು ಎಣಿಸುವರಾದರೆ ಅವರನ್ನು ನೀವು ಬಿಡಬೇಡಿರಿ. ನಾನು ನಿಮ್ಮನ್ನು ಬಿಡದೆ ಹೇಗೆ ಪರೀಕ್ಷೆಮಾಡುತ್ತಾ ಬಂದೆನೋ ಹಾಗೆಯೇ ಅವರಿಗೂ ತೊಂದರೆಕೊಟ್ಟು ದಂಡನೆಯನ್ನು ವಿಧಿಸಿರಿ. ಅಜ್ಞಾನವು ಕವಿದಿರುವುದರಿಂದ ನನ್ನ ಮಕ್ಕಳು ತಮ್ಮಲ್ಲಿ ತಾವೇ ಮಹಾಜ್ಞಾನಿಗಳೆಂದು ತಿಳಿದುಕೊಂಡರಾಗಲೀ ಅಥವಾ ಕೇವಲ ನಿಸ್ಸಾರವಾದ ಜೀವನವನ್ನು ತಾಳಿ ಅದನ್ನೇ ಉತ್ತಮವೆಂದೆಣಿಸಿ ಬಾಳಿದರಾಗಲೀ, ನಾನು ಇತರರಿಗೆ ತೊಂದರೆಕೊಟ್ಟಂತೆ ನೀವೂ ಅವರನ್ನು ಚೆನ್ನಾಗಿ ಶೋಧಿಸಿಬಿಡಿರಿ. ಹೀಗೆ ನೀವು ಮಾಡುವಿರಾದರೆ ನನಗೂ ನನ್ನ ಮಕ್ಕಳಿಗೂ ಹಿತವನ್ನು ಮಾಡಿದವರಾಗುವಿರಿ.

ಕಾಲವು ಅತಿಕ್ರಮಿಸಿತು. ನೀವು ಇನ್ನೂ ಕೆಲವುಕಾಲ ಪ್ರಾಣದೊಡನೆ ಇರುವುದನ್ನೂ, ನಾನೀಗಲೇ ನಿಮ್ಮನ್ನು ಅಗಲಿಹೋಗುವುದನ್ನೂ ನಿಯಮಿಸಿರುವ ಕರುಣಾಮಯನಾದ ಈಶ್ವರನ ರಕ್ಷಣೆಗೆ ಪಾತ್ರವಾಗುವ ಭಾಗ್ಯವು ನಿಮ್ಮದೇ ನನ್ನದೇ ಎನ್ನುವುದನ್ನು ಈಶ್ವರನೇ ಬಲ್ಲನು. ಅಪ್ಪಣೆಯನ್ನು ಕೊಡಿರಿ.

# ಕ್ರಿಟೋ ಸೋಕ್ರಟೀಸ್ ಸಂವಾದ



ವರ್ಷಕ್ಕೊಂದು ಬಾರಿ ಆಥೆನ್ಸ್‌ನಗರದವರು ಡೀಲಾಸ್ ದ್ವೀಪ ದಲ್ಲಿದ್ದ ಅಪೊಲ್ಲೋವಿನ ಗುಡಿಗೆ ಅರ್ಪಿಸುವುದಕ್ಕಾಗಿ ಸಾಮಗ್ರಿಗಳನ್ನು ಶೇಖರಿಸಿ ಮಾಸಲಿಟ್ಟ ಒಂದು ಹಡಗಿನಲ್ಲಿ ಕಳಿಸುವುದು ವಾಡಿಕೆ. ಹಿಂದೆ ಗ್ರೀಕ್‌ವೀರನಾದ ಥೀಸಿಯುಸ್ಸನು ಕ್ರೀಟ್ ದ್ವೀಪಕ್ಕೆ ಹೋದನು. ಆ ಸಮಯದಲ್ಲಿ ಅವನಿಗೆ ಬಹಳ ಆಪತ್ತು ಸಂಭವಿಸಿತು. ಅವನು ಸುರಕ್ಷಿತನಾಗಿ ಬಂದುದಕ್ಕಾಗಿ ಆಥೆನ್ಸಿನ ವರು ವರ್ಷಕ್ಕೊಮ್ಮೆ ಅಪೊಲ್ಲೋಗುಡಿಗೆ ಥೀಸಿಯುಸ್ಸಿನ ಹಡಗಿ ನಲ್ಲಿಯೇ ಪೂಜಾಸಾಮಗ್ರಿಗಳನ್ನು ಕಳಿಸುವದಾಗಿ ಹರಕೆಮಾಡಿಕೊಂ ಡರು. ಈ ರೀತಿಯಾಗಿ ಆಥೆನ್ಸಿನಿಂದ ಹಡಗು ಹೊರಟಮೇಲೆ ಅದು ತಿರುಗಿಬರುವವರೆಗೂ ನಗರದಲ್ಲಿ ಜನರು ಕೆಲವು ನಿಯಮಗಳನ್ನು ಆಚರಿಸುತ್ತಿದ್ದರು. ಆ ಹಬ್ಬದ ಕಾಲದಲ್ಲಿ ಮರಣದಂಡನೆಯನ್ನು ವಿಧಿಸಿ, ಪ್ರಾಣವನ್ನು ತೆಗೆಯಕೂಡದೆಂದು ಒಂದು ನಿಯಮ. ಸೋಕ್ರಟೀಸನಿಗೆ ವಿಧಿಸಿದ ಮರಣದಂಡನೆಯು ಈ ಹಬ್ಬದ ಕಾಲ ದಲ್ಲಿ ಸಂಭವಿಸಿತಾದ್ದರಿಂದ ಅದನ್ನು ನೆರವೇರಿಸುವುದಕ್ಕಾಗದೆ ಒಂದು ತಿಂಗಳು ತಡೆಯಬೇಕಾಯಿತು. ಆ ತಿಂಗಳು ಮುಗಿಯುವವರೆಗೂ ಸೋಕ್ರಟೀಸನು ಕಾರಾಗೃಹದಲ್ಲಿರಬೇಕಾಯಿತು. ಅಲ್ಲಿ ಅವನ ಇಷ್ಟಮಿತ್ರರು ಆಗಾಗ್ಗೆ ಬಂದು ಅವನನ್ನು ನೋಡುತ್ತಿದ್ದರು. ಆ ಕಾಲದಲ್ಲಿ ನಡೆದ ಸಂಭಾಷಣೆಗಳಲ್ಲಿ ಇದು ಒಂದು.

## ಕಾರಾಗೃಹದಲ್ಲಾದ ಸಂಭಾಷಣೆ

**ಸೋಕ್ರಟೀಸ್:** ಕ್ರಿಟೋ! ಇದೇನು ಇಷ್ಟುಹೊತ್ತಿಗೇ ಬಂದೆ! ಈಗ ಎಷ್ಟುಗಳಿಗೆ?

ಕ್ರಿಟೋ: ಹೌದು. ಬಹುಬೇಗ ಬಂದಿದ್ದೇನೆ. ಈಗ ಇನ್ನೂ ಸೂರ್ಯೋದಯವಾಗುವುದರಲ್ಲಿದೆ.

ಸೋ: ಕಾವಲಿನವರು ಇಷ್ಟು ಬೇಗ ನಿನ್ನನ್ನು ಒಳಗೆ ಬಿಟ್ಟದ್ದು ಆಶ್ಚರ್ಯ!

ಕ್ರಿ: ಅವರು ನನಗೆ ಈಗ ಬಹಳ ಪರಿಚಿತರಾಗಿರುವರಲ್ಲವೆ! ಆಗಾಗ್ಗೆ ಬರುತ್ತಿರುವುದರಿಂದಲೂ, ಅವರಿಗೆ ನಾನು ಮಾಡಿದ ಒಂದು ಉಪಕಾರದ ಸ್ಮರಣೆಯಿಂದಲೂ ಅವರು ನನ್ನನ್ನು ತಡೆಯುವುದಿಲ್ಲ.

ಸೋ: ನೀನು ಬಂದು ಬಹಳ ಹೊತ್ತಾಯಿತೇ?

ಕ್ರಿ: ಹೌದು. ಆಗಲೇ ಬಂದೆನು.

ಸೋ: ಹಾಗಾದರೆ ಏತಕ್ಕೆ ನನ್ನನ್ನು ಎಬ್ಬಿಸಲಿಲ್ಲ. ಸುಮ್ಮನೆ ಮಾತನಾಡದೆ ಏತಕ್ಕೆ ಕುಳಿತಿದ್ದೆ?

ಕ್ರಿ: ಸೋಕ್ರಟೀಸ್! ನನಗಾದರೋ ದುಃಖದಿಂದ ನಿದ್ದೆ ಹತ್ತುವುದಿಲ್ಲ. ನಿಮ್ಮನ್ನು ನೋಡಿದರೆ ನನಗೆ ಆಶ್ಚರ್ಯವಾಗುತ್ತದೆ. ಚಿಂತೆಯಿಲ್ಲದೆ ಸುಖವಾಗಿ ನಿದ್ದೆಹೋಗುವಿರಿ. ಅದನ್ನು ನೋಡಿ ನಿಮ್ಮನ್ನು ಎಬ್ಬಿಸಲು ನನ್ನ ಮನಸ್ಸೊಪ್ಪದೆ ಸುಮ್ಮನಿದ್ದೆ. ಯಾವಾಗಲೂ ನಿಮ್ಮ ಮನಸ್ಸು ಸುಖದುಃಖಗಳಿಂದ ಚಲಿಸದೆ ಒಂದೇ ರೀತಿಯಲ್ಲಿರುವುದನ್ನು ನಾನು ತಿಳಿದಿರುವೆನು. ಆದರೆ ಈಗ ಇಂತಹ ದೊಡ್ಡ ಸಂಕಟ ಪ್ರಾಪ್ತವಾದಾಗ ಶಾಂತತೆಯಿಂದಲೂ ಸಾವಧಾನದಿಂದಲೂ ನೀವು ಎಲ್ಲವನ್ನೂ ಸಹಿಸುವುದನ್ನು ನೋಡಿ ನಾನು ಏನೆಂದು ಹೇಳಲಿ?

ಸೋ: ಇದೇನು ನೀನು ಹೇಳುವುದು? ನನ್ನ ವಯಸ್ಸಿನಲ್ಲಿ ಮರಣವು ಒಂದು ಅನಿಷ್ಟವೆಂದು ನಾನು ಮನಸ್ಸಿನಲ್ಲಿ ಕಳವಳಗೊಂಡರೆ ನಗೆಗೇಡಲ್ಲವೇ?

ಕ್ರಿ : ನಿಮ್ಮಂತಹ ವಯೋವೃದ್ಧರೂ ಇಂತಹ ಸಂದರ್ಭಗಳಲ್ಲಿ ಮನಸ್ಥೈರ್ಯವನ್ನು ಕೈಬಿಟ್ಟು, ತಮಗೆ ಬಂದ ಸಂಕಟಗಳನ್ನು ಸಹಿಸದೆ, ಚಿಂತೆಯಲ್ಲಿ ಮುಳುಗಿರುವುದನ್ನು ನೋಡಿರುತ್ತೇನೆ.

ಸೋ : ನಿಜವೇ. ನೀನು ಈಗ ಇಷ್ಟುಬೇಗ ಬಂದ ಕಾರಣವೇನು?

ಕ್ರಿ : ಒಂದು ಕೆಟ್ಟ ಸಮಾಚಾರವನ್ನು ತಂದಿರುವೆನು. ಸೋಕ್ರಟೀಸ್. ಅದು ನಿಮಗೇನೂ ಕೆಟ್ಟ ಸಮಾಚಾರವಲ್ಲ. ಆದರೆ ನನಗೂ ನಿಮ್ಮ ಮಿತ್ರರನೇಕರಿಗೂ ಮಾತ್ರ ಇದಕ್ಕಿಂತಲೂ ದುಃಖದ ಸಮಾಚಾರವಿನ್ನಿಲ್ಲ. ಉಳಿದವರಿರಲಿ, ನನಗಂತೂ ಇದನ್ನು ಸಹಿಸಲಿಕ್ಕಾಗಲಿಲ್ಲ. ಸೋಕ್ರಟೀಸ್ !

ಸೋ : ಏನದು? ಹಡಗು ತಿರುಗಿ ಬಂದುಬಿಟ್ಟಿತೇನು? ನನ್ನ ದಂಡನೆಯು ಸಮೀಪಿಸುವ ಕಾಲವು ಬಂದಿತೆಂದು ಈರೀತಿ ಹೇಳುವಿಯಾ?

ಕ್ರಿ : ಹಡಗು ಇನ್ನೂ ಬಂದಿಲ್ಲ. ಆದರೆ ಈಹೊತ್ತು ಬಂದು ಸೇರಬಹುದೆಂದು ತೋರುತ್ತದೆ. ಸೂನಿಯಂ ರೇವಿನಿಂದ ಬಂದ ಕೆಲವರು ಸಮಾಚಾರವನ್ನು ತಂದಿರುವರು. ಅವರು ಹೇಳುವದರಲ್ಲಿ ಹಡಗು ಈ ಹೊತ್ತು ಬಂದು ನಮ್ಮ ನಗರವನ್ನು ಸೇರುವುದೆಂದು ತಿಳಿಯುಬರುತ್ತದೆ. ಸೋಕ್ರಟೀಸ್ ! ನಾಳೆ ನಿಮ್ಮ ಆಯುಸ್ಸು ಮುಗಿಯುವುದಲ್ಲಾ ! ಸಹಿಸುವುದೆಂತು?

ಸೋ : ಕ್ರಿಟೋ ! ದೈವೇಚ್ಛೆಯಂತಾಗಲಿ. ಆದರೆ ಹಡಗು ಇಂದು ಬಾರದು. ನಾಳೆಯೇ ಬರುವುದೆಂದು ನನಗೆ ತೋರುತ್ತದೆ.

ಕ್ರಿ : ಏತಕ್ಕೆ ಹೀಗೆ ಹೇಳುವಿರಿ?

ಸೋ : ಹಡಗು ಬಂದ ಮರುದಿನವೇ ನಾನು ಪ್ರಾಣತ್ಯಾಗ ಮಾಡಬೇಕಲ್ಲವೇ?

ಕ್ರಿ : ಹೌದು. ಅದೇ ಅಧಿಕಾರಿಗಳ ಏರ್ಪಾಡು.

ಸೋ : ಹಾಗಾದರೆ ಹಡಗು ನಾಳೆಯೇ ಬರುವುದೆಂದು ನನಗೆ ತೋರುವುದು. ನಾನು ಕಂಡ ಒಂದು ಕನಸಿನಿಂದ ಹೀಗೆ ಣಿಸುವೆನು. ನೀನು ಒಂದು ನನ್ನನ್ನು ಎಬ್ಬಿಸದೇ ಕುಳಿತಿದ್ದೆಯಲ್ಲಾ ಆಗಲೇ ಕನಸನ್ನು ಕಂಡೆನು. ಎಬ್ಬಿಸದೇ ಇದ್ದುದು ಒಳ್ಳೆಯದಾಯಿತು.

ಕ್ರಿ : ಅದೇನು ಕನಸು ನನಗೆ ಹೇಳುವಿರಾ?

ಸೋ : ಸುಂದರವಾದ ಸ್ತ್ರೀರೂಪವೊಂದು ಮಂಗಳ ವಸ್ತ್ರಗಳನ್ನು ಧರಿಸಿ, ನನ್ನನ್ನು ಕರೆದು "ಈ ಹೊತ್ತಿಗೆ ಮೂರನೇದಿನ ನೀವು ಸುಂದರವಾದ ಸ್ವರ್ಗಕ್ಕೆ ಬರುವಿರಲ್ಲವೇ?" ಎಂದು ಹೇಳಿದಂತೆ ಕನಸುಕಂಡೆನು. ಇದರ ರಹಸ್ಯವನ್ನು ತಿಳಿದೆನು. ಹಡಗು ನಾಳೆಬರುವುದೆಂದು ಕಂಡುಕೊಂಡೆನು.

ಕ್ರಿ : ಅಯ್ಯೋ! ನಿಮ್ಮ ಕನಸಿನ ರಹಸ್ಯವು ಸ್ಪಷ್ಟವಾಗಿದೆ ಸೋಕ್ರಟೀಸ್! ಮತ್ತೊಮ್ಮೆ ನಾನು ನಿಮ್ಮನ್ನು ಬೇಡಿಕೊಳ್ಳುವೆನು. ನನ್ನ ಮಾತನ್ನು ಕೇಳಿ. ಪ್ರಾಣವನ್ನು ಉಳಿಸಿಕೊಳ್ಳಿ. ನೀವು ಮೃತರಾದರೆ ನಾನು ದುಃಖವನ್ನು ಹೇಗೆ ಸಹಿಸುವೆನು? ನೀವು ಹೋದನಂತರ ನಿಮ್ಮಂತಹ ಮಿತ್ರರನ್ನು ನಾನು ಕಾಣುವೆನೇ? ನನ್ನನ್ನೂ ನಿಮ್ಮನ್ನೂ ಚೆನ್ನಾಗಿ ತಿಳಿಯದವರು ಏನು ಹೇಳುವರು? ನಾನು ಇಷ್ಟಪಟ್ಟಿದ್ದರೆ ದ್ರವ್ಯವನ್ನು ವೆಚ್ಚಮಾಡಿ ನಿಮ್ಮನ್ನು ಸೆರೆಯಿಂದ ತಪ್ಪಿಸಬಹುದಾಗಿತ್ತು. ಹಾಗೆ ಮಾಡದೆ ನಾನು ಲೋಭಿಯಾದೆನೆಂದು ನನ್ನಮೇಲೆ ದೂರುಹೇಳುವರು. ಒಬ್ಬನು ತನ್ನ ಆಪ್ತಮಿತ್ರನನ್ನು ಬಿಡಿಸಲು ಹಣವನ್ನು ಕೊಡದೆ ಹಿಂಜರಿದನೆಂದು ಜನಗಳು ಆಡಿಕೊಳ್ಳುವುದಕ್ಕಿಂತಲೂ ದೊಡ್ಡ ಅಪಮಾನವೂ ನಿಂದೆಯೂ ಮನುಷ್ಯನಿಗಿಲ್ಲ. ಸೆರೆಯಿಂದ ಹೋಗಲಾರೆನೆಂದು ನೀವು ಹಟ

ಹಿಡಿದ ಸಂಗತಿಯನ್ನು ಲೋಕವು ನಂಬುವುದಿಲ್ಲ. ನಾವು ಪ್ರಯತ್ನ ಮಾಡಲಿಲ್ಲವೆಂದೇ ಜನಗಳು ನಂಬುತ್ತಾರೆ.

ಸೋ: ಮಿತ್ರ! ಕ್ರಿಟೋ! ಏತಕ್ಕೆ ಹೀಗೆ ಮಾತನಾಡುತ್ತೀ! ನಾವು ಪಾಮರರಾಡಿಕೊಳ್ಳುವುದನ್ನು ಕಂಡು ಏತಕ್ಕೆ ಚಿಂತಿಸಬೇಕು? ಉತ್ತಮರ ಮಾತನ್ನೇ ಗಮನಿಸತಕ್ಕದ್ದು. ಅವರೇನೆಣಿಸುವರೆಂದು ನಾವು ಯೋಚಿಸಬೇಕು. ಅವರು ನಿಜವನ್ನು ತಿಳಿದವರಲ್ಲವೇ?

ಕ್ರಿ: ಹಾಗಲ್ಲ ಸೋಕ್ರಟೀಸ್! ಲೋಕಾಪವಾದಕ್ಕೂ ನಾವು ಗಮನಕೊಡಬೇಕು. ಈಗ ನಿಮಗೆ ಸಂಭವಿಸಿದ ವಿಪತ್ತನ್ನೇ ನೋಡಿ. ಲೋಕಾಪವಾದದಿಂದ ಎಂತಹ ದೊಡ್ಡ ಕಷ್ಟ ಸಂಭವಿಸಿತು? ಸುಳ್ಳು ಆರೋಪಣೆಯನ್ನು ಹೊರಿಸಿದ ಪಾಮರ ಜನಗಳ ದುರಭಿಪ್ರಾಯದಿಂದಲ್ಲವೇ ನಿಮಗೆ ಈಕೇಡು ಒದಗಿದ್ದು?

ಸೋ: ಕ್ರಿಟೋ! ಹಾಗಲ್ಲ. ಅವರಿಂದ ದೊಡ್ಡ ಕಷ್ಟವೇನೂ ಸಂಭವಿಸುವುದಿಲ್ಲ. ದೊಡ್ಡ ಶುಭವೂ ಆಗುವುದಿಲ್ಲ. ಜ್ಞಾನವಾಗಲೀ ಅಜ್ಞಾನವಾಗಲೀ ಲೋಕದ ಪಾಮರರ ವಾಕ್ಕಿನಿಂದ ಮಾರ್ಪಡುವುದಿಲ್ಲ.

ಕ್ರಿ: ಹಾಗೆಯೇ ಇರಬಹುದು. ಸೋಕ್ರಟೀಸ್! ನನ್ನ ಮಾತು ಕೇಳಿ. ನನ್ನ ವಿಷಯದಲ್ಲಿಯಾದರೂ, ಇತರ ಮಿತ್ರರ ವಿಷಯದಲ್ಲಿಯಾದರೂ ನೀವು ಚಿಂತಿಸಬೇಡಿ. ನೀವು ಸೆರೆಯಿಂದ ತಪ್ಪಿಸಿಕೊಂಡುಹೋದರೆ ನಮ್ಮ ಮೇಲೆ ಅಪರಾಧವನ್ನು ಹೊರಿಸುವರು. ನಿಮ್ಮನ್ನು ತಪ್ಪಿಸಿದ ಅಪರಾಧಕ್ಕಾಗಿ ನಮಗೆ ದ್ರವ್ಯ ನಷ್ಟವಾಗುವುದು. ನಮ್ಮ ಸ್ವತ್ತೆಲ್ಲವೂ ಹೋಗಬಹುದು. ಅಲ್ಲದೆ ಬೇರೆ ದಂಡನೆಗಳಿಗೂ ನಾವು ಗುರಿಯಾಗಬಹುದು—ಎಂದಲ್ಲವೇ ನೀವು ಭಯಪಡುವುದು? ಕೇಳಿ. ಅಂತಹ ಚಿಂತೆ ನಿಮಗೇನೂ

ಬೇಡ. ಇಂತಹ ಕಷ್ಟನಷ್ಟಗಳನ್ನು ಕಂಡು ನಾವು ಹಿಂಜರಿಯಕೂಡದು. ನಿಮ್ಮ ಪ್ರಾಣವನ್ನು ಉಳಿಸುವುದು ನಮ್ಮ ಕರ್ತವ್ಯ. ಅದನ್ನು ಸಾಧಿಸುವುದಕ್ಕೆ ಎಂತಹ ಅಪಾಯುಗಳನ್ನಾದರೂ ನಾವು ಲಕ್ಷ್ಯಮಾಡಕೂಡದು. ನಾನು ಹೇಳುವುದನ್ನು ತೆಗೆದುಹಾಕಬೇಡಿ. ಕೈಜೋಡಿಸಿ ಬೇಡಿಕೊಳ್ಳುವೆನು.

ಸೋ: ನೀನು ಹೇಳುವ ಆಕ್ಷೇಪಣೆಯು ನಿಜ. ಇನ್ನೂ ಅನೇಕ ವಿಷಯುಗಳೂ ಇವೆ.

ಕ್ರಿ: ಅವುಗಳನ್ನು ಕುರಿತು ಯೋಚಿಸಬೇಡಿ. ನಮಗೆ ಆಳುಗಳು ಇದ್ದಾರೆ. ಹೆಚ್ಚು ಖರ್ಚಿಲ್ಲದೆ ಅವರು ನಿಮ್ಮನ್ನು ಸೆರೆಯಿಂದ ಬಿಡುಗಡೆ ಮಾಡಲು ಸಿದ್ಧವಾಗಿದ್ದಾರೆ. ನನ್ನ ಆಸ್ತಿಯೆಲ್ಲವನ್ನೂ ನಿಮ್ಮ ವಿಷಯುದಲ್ಲಿ ಖರ್ಚುಮಾಡಲು ನಾನು ಮನಃಪೂರ್ವಕವಾಗಿ ಒಪ್ಪಿರುವುದು ಸಾಲದೇ? ನನ್ನ ಹಣವನ್ನು ಉಪಯೋಗಿಸಕೂಡದೆಂದು ನೀವು ಒಂದು ವೇಳೆ ಎಣಿಸಿದರೆ ಇನ್ನೂ ನಿಮಗೆ ಬೇಕಾದ ಜನರು ಇತರ ನಗರಗಳಿಂದ ಬಂದಿರುವರು. ಆಥೆನ್ಸಿನಲ್ಲಿಯೇ ಇರುವರು. ಅವರು ನಿಮಗೆ ಗೊತ್ತುಂಟು. ಅವರು ತಮ್ಮ ಹಣವನ್ನು ಖರ್ಚುಮಾಡಲು ಸಿದ್ಧವಾಗಿದ್ದಾರೆ. ಥೀಬ್ಸ್ ನಗರದ ಸಿಮ್ಮಿಯುಸ್ ಎನ್ನುವ ಪ್ರಭುವು ಇದಕ್ಕಾಗಿಯೇ ಬೇಕಾದಷ್ಟು ದ್ರವ್ಯವನ್ನು ತೆಗೆದುಕೊಂಡು ಬಂದಿದ್ದಾನೆ. ಇನ್ನೂ ಕೆಬೀಸ್ ಎನ್ನುವ ಪ್ರಭುವೂ ಹಾಗೂ ಅನೇಕರು ಇದೇ ರೀತಿ ಸನ್ನದ್ಧರಾಗಿದ್ದಾರೆ. ಆದುದರಿಂದ ಇಂತಹ ಸಂದೇಹಗಳನ್ನಿಟ್ಟುಕೊಂಡು ಹಿಂತೆಗೆಯಬೇಡಿ. ಪ್ರಾಣವನ್ನುಳಿಸಿಕೊಂಡು ನಮ್ಮ ನಗರವನ್ನು ಬಿಟ್ಟು ಅನ್ಯದೇಶಗಳಿಗೆ ಹೋಗಿ. ಯಾವರೀತಿ ಕಾಲವನ್ನು ಕಳೆಯುವುದೆಂದು ನ್ಯಾಯಸ್ಥಾನದಲ್ಲಿ ಆಕ್ಷೇಪಿಸಿದಿರಲ್ಲಾ ಅದನ್ನೇ ದೊಡ್ಡದು ಮಾಡಿಕೊಳ್ಳಬೇಡಿ. ನೀವು ಹೋಗುವುದೇ

ಆದರೆ ನಿಮ್ಮನ್ನು ಎದುರುಗೊಂಡು ನಿಮಗೆ ಸುಖಾಗಮನ ವನ್ನು ಬಯಸಲು ಅನೇಕ ನಗರಗಳು ಸಿದ್ಧವಾಗಿವೆ. ಥೆಸ್ಸಲೀ ರಾಜ್ಯಕ್ಕೆ ನೀವು ಹೋಗುವುದೇ ಆದರೆ ಅಲ್ಲಿ ನನ್ನ ಮಿತ್ರರಿರುವರು. ಅವರು ನಿಮ್ಮನ್ನು ಸತ್ಕರಿಸಿ ನಿಮಗೆ ಯಾವ ವಿಧವಾದ ತೊಂದರೆಗಳೂ ಬಾರದಂತೆ ನೋಡಿ ಕೊಳ್ಳುವರು. ಅಲ್ಲದೆ, ಸೋಕ್ರಟೀಸ್, ನೀವುನಿಷ್ಕಾರ ಣವಾಗಿ ಪ್ರಾಣವನ್ನು ಕಳೆದುಕೊಂಡರೆ ಅದು ದೊಡ್ಡ ಪಾಪ. ನಿಮ್ಮ ಶತ್ರುಗಳೊಡನೆ ನೀವೇ ಸೇರಿಕೊಂಡು ಅವರ ಎಣಿಕೆಗಳನ್ನು ನೆರವೇರಿಸುವುದು ನ್ಯಾಯವಲ್ಲ. ನಿಮ್ಮ ಮಕ್ಕಳನ್ನು ಅನಾಥರನ್ನಾಗಿ ಬಿಟ್ಟುಬಿಡಬಹುದೇ? ನೀವು ಮಾಡಬೇಕಾದ ಕರ್ತವ್ಯಗಳನ್ನು ಮಾಡದೆ ಅವ ರಿಗೆ ವಿದ್ಯಾಭ್ಯಾಸವನ್ನು ಕೊಡದೆ ಅವರನ್ನು ಈರೀತಿಯಲ್ಲಿ ಬಿಟ್ಟುಹೋಗುವುದು ತಕ್ಕುದಲ್ಲ. ಅವರಿಗೂ ದಿಕ್ಕಿಲ್ಲದ ಅನಾಥ ಮಕ್ಕಳ ಗತಿಯಾಗುವುದು. ಸರಿಯಾಗಿ ಬೆಳಸಿ ವಿದ್ಯಾಭ್ಯಾಸಮಾಡಿಸದೆ ಹೋದರೆ ಮಕ್ಕಳನ್ನು ಹೆತ್ತುದೇ ತಪ್ಪು. ಧರ್ಮವನ್ನು ಆಯುಷ್ಪರ್ಯಂತವೂ ಬೋಧಿಸಿದ ನೀವು ಈ ವಿಷಯವನ್ನು ಮರೆತಿರುವಂತೆ ಕಾಣುವುದು. ಧೈರ್ಯವನ್ನೂ ಧರ್ಮವನ್ನೂ ಬಿಟ್ಟು ಕರ್ತವ್ಯಭ್ರಷ್ಟ ರಾಗಿ ಪ್ರಾಣವನ್ನು ಬಿಡುವುದು ಪಾಪವಾಗುವುದು. ನೀ ವೀಗ ಮಾಡಲಿರುವುದು ಅದೇ. ನಿಮ್ಮ ಮೇಲೆಯೂ ನಿಮ್ಮ ಮಿತ್ರರಾದ ನಮ್ಮ ಮೇಲೆಯೂ ಇದು ಒಂದು ದೊಡ್ಡ ಅಪವಾದ ನಿಲ್ಲುವುದು. ನಾವು ಭಯಪಟ್ಟು ಪ್ರಯತ್ನ ಪಡದೇ ಇದ್ದುದರಿಂದಲೇ ಈರೀತಿ ಆಗಿಹೋ ಯಿತೆಂದು ಎಣಿಸಬೇಕಾಗಿ ಬರುವುದು. ನೀವು ನ್ಯಾಯ ಸ್ಥಳಕ್ಕೆ ಹೋಗದೇ ಇದ್ದಿರಬಹುದಾಗಿತ್ತು. ಹೋದ ಮೇಲೆ ಮೊಕದ್ದಮೆಯನ್ನು ಬೇರೆ ರೀತಿಯಲ್ಲಿ ನಡೆಸಬಹು ದಾಗಿತ್ತು. ಅನಂತರ ಈಗ ಪ್ರಾಣವನ್ನುಳಿಸಿಕೊಳ್ಳುವ

ಮಾರ್ಗವನ್ನು ಹುಡುಕದೇ ಇರುವುದು ನಮ್ಮ ಕರ್ತವ್ಯ ಲೋಪದಿಂದಲೂ ಭಯದಿಂದಲೂ ಆಯಿತೆಂದು ಜನಗಳೆಣಿಸುವರು. ನಾವು ಜನ್ಮವನ್ನೆತ್ತಿ ನಿಮಗೆ ಮಿತ್ರರಾಗಿದ್ದೂ ಏನು ಫಲ? ಈಗ ನಿಮ್ಮ ಪ್ರಾಣವನ್ನು ಉಳಿಸದೆಹೋದರೆ ಮಾಡಬಹುದಾದ ಕರ್ತವ್ಯವನ್ನು ಮಾಡದೇ ಬಿಟ್ಟೆವೆನ್ನುವ ಅಪವಾದ ನಮ್ಮ ಮೇಲೆ ನಿಲ್ಲುವುದು. ನೀವು ವ್ಯರ್ಥವಾಗಿ ಪ್ರಾಣತ್ಯಾಗ ಮಾಡುವುದು ನಮಗೂ ನಿಮಗೂ ಗೌರವವಲ್ಲ. ದೀರ್ಘವಾಗಿ ಆಲೋಚಿಸಿ. ಇನ್ನು ಯೋಚನೆ ಮಾಡಲು ಅವಕಾಶವಿಲ್ಲ. ಈಗಲೇ ತೀರ್ಮಾನಿಸಿ, ಮಾಡಬೇಕಾದ ಕೆಲಸವನ್ನು ಮಾಡುವ ಸಮಯವು ಸಮೀಪಿಸಿದೆ. ಎಲ್ಲವೂ ಈ ರಾತ್ರಿಯೊಳಗೆ ಮುಗಿಯಬೇಕು. ಇನ್ನು ತಾಮಸ ಮಾಡಿದರೆ ಕೆಲಸ ಕೆಟ್ಟುಹೋಗುವುದು. ಅಯ್ಯೋ! ಸೋಕ್ರಟೀಸ್ ಉದಾಸೀನರಾಗಬೇಡಿ. ನಾನು ಹೇಳುವುದನ್ನು ತಳ್ಳಿಹಾಕಬೇಡಿ.

ಸೋ: ಪ್ರಿಯಮಿತ್ರನೇ! ನಾನು ಹೇಳುವುದನ್ನು ಕೇಳು. ನನ್ನ ಪ್ರಾಣವನ್ನು ಉಳಿಸಲು ನೀವು ಚಿಂತಿಸುವುದು ಧರ್ಮವಾಗಿದ್ದರೆ ಸರಿ. ಧರ್ಮಕ್ಕೆ ವಿರೋಧವಾಗಿ ಹಾನಿಕರವಾಗಿದ್ದರೆ ನನ್ನನ್ನು ತಪ್ಪಿಸಲು ನೀವಿಷ್ಟು ಚಿಂತಿಸುವುದು ಅಯುಕ್ತವಲ್ಲವೇ? ಈಗ ನೋಡುವ. ನೀವು ಹೇಳುವಂತೆ ಮಾಡುವುದು ಯುಕ್ತವೇ ಅಲ್ಲವೇ ಚೆನ್ನಾಗಿ ಆಲೋಚಿಸಿ. ಯಾವುದು ಸತ್ಯವಾದದ್ದು, ಯಾವುದು ಸನ್ಮಾರ್ಗ ಎಂಬುದನ್ನು ತಿಳಿದುಕೊಂಡಮೇಲೆ ಆ ಮಾರ್ಗವನ್ನೇ ನಾನು ಅನುಸರಿಸುವೆನು. ಇದೇ ನನ್ನ ಜೀವಮಾನದಲ್ಲೆಲ್ಲಾ ನಾನು ಪಾಲಿಸಿರುವ ನಿಯಮ. ಈಗಲೂ ಹೀಗೆ ಮಾಡುವೆನೇ ಹೊರತು ಈ ಮರಣದಂಡನೆ ಸಂಭವಿಸಿತೆಂದು ನನ್ನ ಸ್ವಾಭಾವಿಕವಾದ ಶೀಲವನ್ನು ಬಿಡಲಾರೆನು. ಮರಣದಂ

ಡನೆ ಮಾತ್ರವಲ್ಲ, ಮಕ್ಕಳನ್ನು ಗೊಗ್ಗಯ್ಯ, ಪಿಶಾಚಿ, ಭೂತವೆಂದು ಹೇಳಿ ಹೆದರಿಸುವಂತೆ ನನ್ನನ್ನು ನಗರದವರು ಹೆದರಿಸಲು ಇನ್ನೂ ಹೊಸದಂಡನೆಗಳನ್ನು ನಿರ್ಮಾಣಮಾಡಿದರೂ ನನ್ನ ಧರ್ಮವನ್ನು ನಾನು ಬಿಡಲಾಗುವುದಿಲ್ಲ. ಈಗ ನೀವು ಹೇಳುವುದನ್ನು ಚೆನ್ನಾಗಿ ವಿಚಾರಿಸಿ ನೋಡುವ. ಜನರು ನಮ್ಮನ್ನು ಹೀಯಾಳಿಸುವರು, ಹೀಗೆ ಹೇಳುವರು, ಹಾಗೆ ಹೇಳುವರು ಎಂದಲ್ಲವೇ ನೀನು ಹೇಳಿದುದು? ಈ ವಿಷಯವನ್ನು ಮೊದಲು ವಿಚಾರಿಸುವ. ನಾವು ಇದುವರೆಗೂ ಒಂದು ಮನೋಧರ್ಮವನ್ನು ದೃಢವಾಗಿಟ್ಟುಕೊಂಡಿದ್ದೆವು. ಆಗಾಗ್ಗೆ ಇತರರೊಡನೆ ಚರ್ಚೆ ನಡೆಸುತ್ತಿದ್ದೆವು ಅಲ್ಲವೇ? ಅಂದರೆ ಜನಗಳ 'ವದಂತಿ' ಯೆಂದು ಎಲ್ಲರೂ ಆಡಿಕೊಳ್ಳುವುದನ್ನು ನಾವು ಗಮನಿಸಬೇಕಾಗಿಲ್ಲ. ಅರಿತವರ ಕೆಲವರ ಅಭಿಪ್ರಾಯವೇ ಗಮನಿಸಲರ್ಹವೆಂದು ನೀನೂ, ನಾನೂ, ಎಷ್ಟೋ ಸಲ ಮಾತು ಆಡಿಕೊಂಡಿರುವೆವಲ್ಲವೇ? ಇದು ತಪ್ಪೋ ನಿಜವೇ? ಬರಿ ಯಾತಿಗೋಸ್ಕರವೇ? ಚೆನ್ನಾಗಿ ವಿಚಾರ ಮಾಡದೆ ನಾವು ಆರೀತಿ ಮಾತನಾಡುತ್ತಿದ್ದೆವೇ? ಇದನ್ನು ಮೊದಲು ಹೇಳು. ನೀನೂ ಈಗ ಪ್ರಾಣವನ್ನು ಕಳೆದುಕೊಳ್ಳುವ ಸಂಭವವಿಲ್ಲವಷ್ಟೆ. ಆದುದರಿಂದ ಆಪತ್ಕಾಲದಲ್ಲಿ ಬುದ್ಧಿಭ್ರಮಣವಾದವರು ಮಾತನಾಡುವಂತೆ ನೀನು ಅಭಿಪ್ರಾಯ ಕೊಡಬೇಕಾಗಿಲ್ಲ. ಯೋಚಿಸಿ ನನಗೆ ಉತ್ತರವನ್ನು ಕೊಡು. ಅರಿವಿಲ್ಲದ ಬಹು ಜನರ ಅಭಿಪ್ರಾಯಗಳನ್ನು ನಾವು ಗಮನಿಸಬೇಕೇ? ಅಥವಾ ಅರಿತ ಕೆಲವರ ಅಭಿಪ್ರಾಯಗಳನ್ನೇ ನಾವು ಹೆಚ್ಚು ಗೌರವಿಸಬೇಕೇ?

ಕ್ರಿ : ಮಹನೀಯರಾದ ಕೆಲವರ ಅಭಿಪ್ರಾಯವೇ ಉತ್ತಮವಾದುದು.

ಸೋ: ಆದುದರಿಂದ ಆ ಕೆಲವರು ಮಾಡುವ ಅಪವಾದವನ್ನೂ, ಶ್ಲಾಘನೆಯನ್ನೂ ನಾವು ಗಮನಿಸಿ ನಡದುಕೊಳ್ಳಬೇಕು.

ಕ್ರಿ: ಹೌದು.

ಸೋ: ಹಾಗೆ ಮಾಡದೆ, ಇತರರ ಅಪವಾದಕ್ಕೆ ಹೆದರಿ ಶ್ಲಾಘನೆಯನ್ನು ನಿರೀಕ್ಷಿಸಿ ನಡೆದರೆ ನೀತಿ ಕೆಡುವುದಲ್ಲವೇ ?

ಕ್ರಿ: ಹೌದು.

ಸೋ: ವೈದ್ಯನು ಹೇಳುವುದನ್ನು ಕೇಳದೆ ಆರೋಗ್ಯಶಾಸ್ತ್ರವನ್ನರಿಯದ ಇತರರನೇಕರು ಹೇಳುವುದನ್ನು ಕೇಳಿ ನಡೆದರೆ ಮೈಕೆಡುವುದುಂಟೇ ?

ಕ್ರಿ: ಹೌದು

ಸೋ: ವೈದ್ಯನ ಮಾತು ಕೇಳದೆ ಹೋದರೆ ಯಾವರೀತಿ ದೇಹವು ಕೆಡುವುದೋ ಹಾಗೆಯೇ ಅರಿತ ಜ್ಞಾನಿಯೊಬ್ಬನ ಮಾತನ್ನು ಕೇಳದೆ ಅನೇಕರು ಹೇಳುವುದನ್ನು ಕೇಳಿ ಹೆದರಿ ನಡೆದರೆ ನಮ್ಮ ಆತ್ಮಕ್ಕೆ ಹಾನಿಯಾಗುವುದು ನಿಜವೇ ?

ಕ್ರಿ: ಆಗುವುದು ನಿಜ.

ಸೋ: ದೇಹಕ್ಕಿಂತ ಆತ್ಮವು ಉತ್ತಮವಾದ ವಸ್ತುವಲ್ಲವೇ ! ದೇಹವನ್ನು ರಕ್ಷಿಸಿಕೊಳ್ಳಲು ನಾವನೇಕರು ಈ ನ್ಯಾಯವನ್ನು ಒಪ್ಪಿಕೊಂಡು ನಡೆಯುತ್ತೇವೆ. ಹೀಗಿರುವಾಗ ದೇಹಕ್ಕಿಂತ ಉತ್ತಮವಾದ ನಿತ್ಯವಾದ ಆತ್ಮವನ್ನು ರಕ್ಷಿಸಿಕೊಳ್ಳಲು ಅದೇ ನ್ಯಾಯವನ್ನು ಸ್ವಲ್ಪವೂ ಅತಿಕ್ರಮಿಸದೆ ಒಪ್ಪಿಕೊಳ್ಳಬೇಕಲ್ಲವೇ ?

ಕ್ರಿ: ಹೌದು ನಿಜ.

ಸೋ: ಆದುದರಿಂದ ಕ್ರಿಟೋ ! ಇದು ಧರ್ಮ ಇದು ಅಧರ್ಮ ಎನ್ನುವ ವಿವೇಕವುಳ್ಳವರ ಅಭಿಪ್ರಾಯವನ್ನೇ ನಾವು ಮನ್ನಿಸಬೇಕು. ಬಹು ಜನರು ಹೀಯಾಳಿಸುವರೆಂದು

ನಾವು ಹೆದರಕೂಡದಲ್ಲವೆ?

ಕ್ರಿ: ಹೌದು ಹಾಗೆಯೇ ಕಾಣುತ್ತದೆ.

ಸೋ: ಆದರೆ ಪಾಮರ ಜನರು ಮರಣದಂಡನೆಯನ್ನು ವಿಧಿಸಬಹುದೋ? ಪ್ರಾಣವನ್ನು ತೆಗೆಯುವ ಅಧಿಕಾರವು ಅವರಿಗಿರುವುದೋ ಎಂದು ನೀನು ಕೇಳುತ್ತೀಯಲ್ಲವೇ?

ಕ್ರಿ: ಹೌದು. ಅದೊಂದು ಆಕ್ಷೇಪಣೆ ಇದ್ದೇ ಇದೆ.

ಸೋ: ಈ ವಿಷಯದಲ್ಲಿಯೂ ನಾವು ಬಹಳ ದಿನಗಳಿಂದ ಒಂದು ತೀರ್ಮಾನಕ್ಕೆ ಬಂದಿರುವೆವಲ್ಲವೇ? ಅದು ಈಗ ಬೇರೆಯಾಯಿತೇ? ಪ್ರಾಣದಿಂದಿರುವುದೇ ದೊಡ್ಡದೇ? ಅಥವಾ ಸನ್ಮಾರ್ಗದಲ್ಲಿ ಜೀವಿಸುವುದೇ ದೊಡ್ಡದೇ? ಹೇಳು.

ಕ್ರಿ: ಸನ್ಮಾರ್ಗದಲ್ಲಿ ಜೀವಿಸುವುದೇ ದೊಡ್ಡದು.

ಸೋ: ಆದುದರಿಂದ ಈಗ ಯೋಚಿಸಿ ನೋಡುವ. ನಾನು ಕಾರಾಗೃಹದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವುದು ಸರಿಯೇ? ತಪ್ಪೇ? ವಿಚಾರಿಸುವ. ಸರಿಯಾಗಿದ್ದರೆ ಅದರಂತೆಯೇ ಮಾಡೋಣ. ತಪ್ಪಾಗಿದ್ದರೆ ಆ ಯೋಚನೆಯನ್ನು ಬಿಡೋಣ. ತಪ್ಪಿಸಿಕೊಳ್ಳಲು ಬೇಕಾದಷ್ಟು ಹಣದ ಖರ್ಚು, ಜನಗಳ ದೂಷಣೆ, ಮಕ್ಕಳ ಯೋಗಕ್ಷೇಮ, ಇವುಗಳೊಂದನ್ನೂ ನಾವು ಗಮನಿಸಬಾರದು. ಒಳ್ಳೆಯದೇ ಅಲ್ಲವೇ ಎಂಬ ವಿಚಾರವನ್ನು ತೀರ್ಮಾನಿಸಬೇಕಾದ್ದಕ್ಕೆ ಇವು ಸರಿಯಾದ ಒರೆಗಲ್ಲಲ್ಲ. ಸರಿಯಾದ ಪ್ರಮಾಣಗಳನ್ನು ತೆಗೆದುಕೊಂಡು ನೋಡುವುದೇ ಕ್ರಮ. ನಾನೂ, ನೀನೂ, ಇತರರೂ, ಏನೇನು ಮಾಡಬೇಕೋ ಅವನ್ನು ಮಾಡಿ ಸೆರೆಯಿಂದ ತಪ್ಪಿಸಿಕೊಳ್ಳುವುದು ಸತ್ಪ್ರವರ್ತನೆಯೋ ಅಲ್ಲವೇ ಎನ್ನುವುದನ್ನು ನೋಡಬೇಕು. ಕೆಟ್ಟದೆಂದು ನಮಗೆ ಕಂಡು ಬಂದರೆ ಪ್ರಾಣವನ್ನು ಕಾಪಾಡಿಕೊ

ಳ್ಳುವುದಕ್ಕಾಗಲೀ ಅಥವಾ ಬೇರೆ ಕಷ್ಟಗಳನ್ನು ದೂರಮಾಡುವುದಕ್ಕಾಗಲೀ ನಾವು ಆ ಕೆಲಸವನ್ನು ಮಾಡಬಾರದಲ್ಲವೇ?

ಕ್ರಿ : ಹೌದು ನಿಜವೇ. ಸೋಕ್ರಟೀಸ್ ಆದರೆ ನಾವೇನು ಮಾಡಬೇಕು.

ಸೋ : ಮಿತ್ರನೆ! ನಾನು ಹೇಳುವುದನ್ನು ಕೇಳು. ಅದರಲ್ಲಿ ತಪ್ಪೇನಾದರೂ ಇದ್ದರೆ ತೋರಿಸಿ ಆ ತಪ್ಪನ್ನು ತಿದ್ದು. ನಾನೊಪ್ಪಿಕೊಳ್ಳುವೆನು. ನಾನು ಹೇಳುವುದರಲ್ಲಿ ಏನೂ ತಪ್ಪಿಲ್ಲದಿದ್ದರೆ ಏತಕ್ಕೆ ಸುಮ್ಮನೆ ಪದೇ ಪದೇ ಪ್ರಾಣವನ್ನುಳಿಸಿಕೊಂಡು 'ಓಡಿ' ಎಂದು ಹೇಳುವಿ? ನಿನ್ನ ಅಭಿಪ್ರಾಯವನ್ನು ನಾನು ಹೆಚ್ಚು ಗೌರವಿಸುವೆನು. ಆದುದರಿಂದ ಈ ವಿಷಯದಲ್ಲಿ ನಿನ್ನನ್ನು ತೃಪ್ತಿಗೊಳಿಸಲು ಬಯಸುತ್ತೇನೆ. ನಾನು ಕೇಳಿದುದಕ್ಕೆ ಉತ್ತರವನ್ನು ಕೊಡು.

ಕ್ರಿ : ಹಾಗೆಯೇ ಆಗಲಿ.

ಸೋ : ನಾವು ತಪ್ಪಾದ ಕೆಲಸಗಳನ್ನು ಮನವರಿತು ಯಾವಾಗಲೂ ಮಾಡಬಾರದಲ್ಲವೇ? ಅಥವಾ ಕೆಲವು ಸಮಯಗಳಲ್ಲಿ ಕೆಲವು ವಿಷಯಗಳಲ್ಲಿ ಹಾಗೆ ಮಾಡುವುದು ಯುಕ್ತವೇ? ನೀನೂ, ನಾನೂ ವಯಸ್ಸಿನಲ್ಲಿ ಮುಪ್ಪಿನವರಾಗಿ ಅನೇಕ ಸಲ ನಾವಿಬ್ಬರೂ ಈ ಧರ್ಮವನ್ನು ಸಿದ್ಧಾಂತಮಾಡಿಕೊಂಡಿರುವೆವಲ್ಲವೇ? ತಪ್ಪು ಕೆಲಸವನ್ನು ಒಂದು ಕಾಲದಲ್ಲಿಯೂ ಮಾಡಕೂಡದು. ಜನಗಳೇನು ಹೇಳುವರೆಂದು ಗಮನಿಸಕೂಡದು. ಮರಣ ಅದಕ್ಕಿಂತಲೂ ಹೆಚ್ಚಾದ ದಂಡನೆಯನ್ನು ನಾವು ಕಂಡು ಭಯಪಡಕೂಡದು, ಎಂದು ನಾವು ಇದಕ್ಕೆ ಮೊದಲೇ ಮಾಡಿದ ಸಿದ್ಧಾಂತವು ಸರಿಯೋ? ತಪ್ಪೋ?

ಕ್ರಿ : ಸರಿಯೇ.

ಸೋ : ಆದುದರಿಂದ ನಾವು ಒಂದು ಕಾಲದಲ್ಲಿಯೂ ತಪ್ಪುಮಾಡ ಬಾರದಲ್ಲವೇ?

ಕ್ರಿ : ಹೌದು.

ಸೋ : ಅಲ್ಲದೆ ಯಾವಾಗಲೂ ತಪ್ಪುಮಾಡಬಾರದೆಂದರೆ ಒಬ್ಬರು ನಮಗೆ ಕೆಡಕುಮಾಡಿದರೂ ಅದಕ್ಕೆ ಪ್ರತಿಯಾಗಿ ನಾವು ಕೆಡಕುಮಾಡಬಾರದಲ್ಲವೆ? ಜನಗಳು ಮುಯ್ಯಿಗೆ ಮುಯ್ಯಿತೀರಿಸಬಹುದೆಂದು ಭಾವಿಸುವುದು ತಪ್ಪಲ್ಲವೆ?

ಕ್ರಿ : ಹೌದು

ಸೋ : ಆದುದರಿಂದ ಕ್ರಿಟೋ! ನಾವು ಯಾರಿಗೂ ಕೆಡಕುಮಾಡ ಬಾರದೆಂದು ಒಪ್ಪಿಕೊಳ್ಳುವಿಯಾ?

ಕ್ರಿ : ಹೌದು. ಮಾಡಲೇಕೂಡದು.

ಸೋ : ಉಪಕಾರಕ್ಕೆ ಉಪಕಾರವೂ ಅಪಕಾರಕ್ಕೆ ಅಪಕಾರವೂ ಮಾಡಬಹುದೆಂದು ಜನಗಳು ಭಾವಿಸುವುದು ತಪ್ಪಲ್ಲವೆ?

ಕ್ರಿ : ನಿಸ್ಸಂದೇಹವಾಗಿ ತಪ್ಪು.

ಸೋ : ತಪ್ಪುಕೆಲಸ ಮಾಡುವುದಾದರೂ ಕೆಡಕು ಮಾಡುವ ದಾದರೂಎಲ್ಲವೂ ಒಂದೇ ಅಲ್ಲವೆ? ನಮಗೆ ಒಬ್ಬನು ಏನು ಕೆಡಕುಮಾಡಿದ್ದರೂ ಅವನಿಂದ ನಮಗೆ ಎಷ್ಟು ದೊಡ್ಡಕೇಡು ಸಂಭವಿಸಿದ್ದರೂ ಅವನಿಗೆ ನಾವು ಕೆಡಕು ಮಾಡಬಾರದು. ತಪ್ಪು ಕೆಲಸವನ್ನೂ ಮಾಡಬಾರದು. ಇದು ನಿಜವಾದ ಧರ್ಮವೆಂದು ಒಪ್ಪುವಿಯಾ? ವಿಚಾರ ಮಾಡಿ ಹೇಳು.

ಹೀಗೆ ನಾವು ಮುಯ್ಯಿಗೆ ಮುಯ್ಯಿತೀರಿಸಿಕೊಳ್ಳಬಾರ ದೆಂದರೆ ಒಬ್ಬನು ನಮಗೆ ಕೆಡಕುಮಾಡಿದರೂ ನಾವು

ಅವನ ಪಾಲಿಗೆ ಕೆಡಕುಮಾಡಬಾರದು. ನೀತಿಯನ್ನು ಬಿಟ್ಟು ನಡೆದುಕೊಳ್ಳಬಾರದು, ಎನ್ನುವುದನ್ನು ಕೆಲವರು ಮಾತ್ರ ಒಪ್ಪಿಕೊಳ್ಳುವರು. ಇತರರನೇಕರು ಒಪ್ಪ ಲಾರರು. ಒಪ್ಪಿದರೂ ಆ ರೀತಿ ನಡೆದುಕೊಳ್ಳಲಾರರು. ಆದುದರಿಂದ ಚನ್ನಾಗಿ ವಿಚಾರಮಾಡಿ ಹೇಳು. ಒಬ್ಬನು ನಮಗೆ ಕೆಡಕುಮಾಡಿದರೆ ಅದಕ್ಕೆ ಪ್ರತಿಯಾಗಿ ನಾವು ಸೇಡುತೀರಿಸಿಕೊಳ್ಳಬಹುದು, ಎಂಬ ಮತವನ್ನುಳ್ಳವರೂ, ಕೆಡುಕಿಗೆ ಪ್ರತಿಯಾಗಿ ಕೆಡಕು ಮಾಡಬಾರದೆಂಬ ಧರ್ಮ ವನ್ನು ಆಚರಿಸುವವರೂ, ಯಾವ ವಿಷಯದಲ್ಲಿಯೂ ಒಂದೇ ಸಿದ್ಧಾಂತಕ್ಕೆ ಬರಲಿಕ್ಕಾಗುವುದಿಲ್ಲ. ಒಬ್ಬನು ಒಳ್ಳೆಯದು ಮಾಡಲೀ ಕೆಟ್ಟದ್ದು ಮಾಡಲೀ ಒಳ್ಳೆಯದು ಮಾಡುವುದೇ ನಮ್ಮ ಕರ್ತವ್ಯ ಎಂಬ ಭಾವನೆಯನ್ನು ನಾವು ಬಹು ಕಾಲದಿಂದಲೂ ಹೊಂದಿರುತ್ತೇವೆ. ಈಗಲೂ ನಾನದನ್ನೇ ದೃಢವಾಗಿ ನಂಬಿದ್ದೇನೆ. ನೀನು ಬೇರೆ ವಿಧವಾಗಿ ಅಭಿಪ್ರಾಯ ಪಡುವಿಯಾ ಹೇಳು?

ಕ್ರಿ : ನನಗೂ ಅದೇ ಭಾವನೆಯಿದೆ.

ಸೋ : ಆದಾದಮೇಲೆ ನಾನು ನಿನ್ನನ್ನು ಕೇಳುವುದೇನೆಂದರೆ, ಒಬ್ಬನು ತಾನು ಆಡಿದಂತೆ ಮಾಡಬೇಕಲ್ಲವೇ? ನ್ಯಾಯಕ್ಕೆ ವಿರುದ್ಧವಲ್ಲದ ಕಾಯಿದೆಗಳನ್ನು ಪಾಲಿಸಬೇಕಲ್ಲವೇ?

ಕ್ರಿ : ಹೌದು. ಪಾಲಿಸಬೇಕು.

ಸೋ : ಈಗ ನೋಡೋಣ. ನಾನು ರಾಜ್ಯದ ಅನುಮತಿಯಿಲ್ಲದೆ ತಪ್ಪಿಸಿಕೊಂಡುಹೋದರೆ ನಾನು ರಾಜ್ಯಕ್ಕೆ ವಿರುದ್ಧವಾಗಿ ನಡದುಕೊಂಡಂತೆ ಆಗಲಿಲ್ಲವೇ? ನಾನು ಯಾವ ನಿಯ ಮಿತವಾದ ಮತ್ತು ನ್ಯಾಯಸಮ್ಮತವಾದ ಕಾಯಿದೆಗಳಿಗೆ ಬದ್ಧನಾಗಿರುವೆನೋ ಅವುಗಳನ್ನು ಅತಿಕ್ರಮಿಸುವಂತಾ ಗುವುದಿಲ್ಲವೇ?

ಕ್ರಿ : ನೀವು ಕೇಳುವುದಕ್ಕೆ ಉತ್ತರ ಹೇಳಲು ನನಗೆ ಶಕ್ತಿಯಿಲ್ಲ. ಈ ವಿಷಯ ನನಗೆ ವಿಶದವಾಗಲಿಲ್ಲ.

ಸೋ : ಚೆನ್ನಾಗಿ ವಿಚಾರಮಾಡಿ ನೋಡು. ನಮ್ಮ ಸ್ವಾತಂತ್ರ್ಯವೂ, ಸ್ವರಾಜ್ಯವೂ, ರೂಪತಾಳಿ, ನಮ್ಮ ಮುಂದೆ ನಿಂತು, ಈರೀತಿ ಪ್ರಶ್ನೆಮಾಡಿದಂತೆ ಅಂದುಕೊಳ್ಳೋಣ. "ಸೋಕ್ರಟೀಸ್! ಸೆರೆಯಿಂದ ತಪ್ಪಿಸಿಕೊಂಡು ಓಡುವಿಯಾ? ಏನುಕೆಲಸ ಮಾಡುವಿ? ನಮ್ಮನ್ನು ಕೊಲೆ ಮಾಡಲು ಅಲ್ಲವೇ ಉದ್ಯುಕ್ತನಾಗಿರುವಿ? ಜನಗಳಿಂದ ನಿರ್ಮಿತವಾದ ಕಾಯಿದೆಗಳನ್ನು ಅವರವರ ಇಷ್ಟಾನುಸಾರ ಅವರವರು ವಿರೋಧಿಸಿ ಆ ಕಾಯಿದೆಗಳನುಸಾರವಾಗಿ ನಡೆಯುವ ನ್ಯಾಯಸ್ಥಳದ ತೀರ್ಮಾನಗಳಿಗೆ ಗೌರವವಿಲ್ಲದೆ ಹೋದರೆ ಅನಂತರ ಒಂದು ರಾಜ್ಯವಾದರು ನಿಲ್ಲುವುದೇ? ನೀನು ನಮ್ಮನ್ನು ಕೊಲ್ಲುವುದಕ್ಕಲ್ಲವೇ ಸಿದ್ಧನಾಗುವಿ" ಎಂದು ಅವು ನನ್ನನ್ನು ಕೇಳುವುದು ನ್ಯಾಯವೇ ಸರಿ. ಇದಕ್ಕೆ ನಾನೇನು ಉತ್ತರಹೇಳಬೇಕು. ಕ್ರಿಟೋ! ಸ್ವರಾಜ್ಯದಲ್ಲಿ ಜನಗಳು ಏರ್ಪಡಿಸಿಕೊಂಡಿರುವ ನ್ಯಾಯನಿಯಮಗಳಿಗೆ ಅನುಸಾರವಾಗಿ ನ್ಯಾಯಸ್ಥಳದಲ್ಲಿ ನಡೆಯುವ ತೀರ್ಮಾನಗಳಿಗೆ ವಿರುದ್ಧವಾಗಿ ನಡೆಯಕೂಡದಲ್ಲವೇ? ಒಂದು ವೇಳೆ ನಾನು ಹೀಗೆ ಹೇಳಬಹುದು. ರಾಜ್ಯವು ನನಗೆ ಕೆಡಕುಮಾಡಿದೆ. ತಪ್ಪಾಗಿ ವಿಧಿಸಲ್ಪಟ್ಟ ತೀರ್ಮಾನವನ್ನು ನಾನೇತಕ್ಕೆ ಒಪ್ಪಿಕೊಳ್ಳಬೇಕು? ಈ ರೀತಿ ನಾನು ಹೇಳುವುದು ಸರಿಯೋ?

ಕ್ರಿ : ಏತಕ್ಕೆ ಹೇಳಬಾರದು?

ಸೋ : ಹೀಗೆ ನಾನು ವಾದಿಸಿದರೆ ನಮ್ಮ ಸ್ವಧರ್ಮವು ಎದುರು ನಿಂತು: "ಸೋಕ್ರಟೀಸ್! ನೀನು ನಮ್ಮೊಡನೆ ಮಾಡಿಕೊಂಡ ಒಡಂಬಡಿಕೆ ಯೇನಾಯ್ತು? ರಾಜ್ಯದಲ್ಲಿ ವಿಧಿ

ಸಲ್ಪಡುವ ಒಂದೊಂದು ತೀರ್ಮಾನವನ್ನೂ ಒಪ್ಪಿಕೊಳ್ಳುವ ದಾಗಿ ನೀನು ಸಮ್ಮತಿಸಲಿಲ್ಲವೇ ? " ಎಂದು ಕೇಳುವುದು. " ಯಾವಾಗಲೂ ಇಂತಹ ಒಡಂಬಡಿಕೆಯನ್ನು ಕೊಟ್ಟು ದನ್ನೇ ಕಾಣೆ ! " ಎಂದು ನಾನು ಹೇಳಿದರೆ ನಮ್ಮ ಸ್ವಧರ್ಮದೇವತೆಯು : " ಅಪ್ಪಾ ! ಕುಟಿಲವಾಗಿ ಮಾತ ನಾಡಬೇಡ. ಏತಕ್ಕೆ ನನ್ನನ್ನೂ ನಗರವನ್ನೂ ಕೊಲ್ಲಲು ಉದ್ಯುಕ್ತನಾಗಿರುವಿ ? ನಾನು ನಿನಗೆ ಏನು ಕೆಡಕುಮಾಡಿ ರುವೆನು ? ಮೊದಲು ನಿನಗೆ ತಂದೆತಾಯಿಯಂತೆ ನಾನಿದ್ದೆ ನಲ್ಲವೇ ? ನಗರದ ಆಡಳಿತದ ಸಹಾಯದಿಂದಲ್ಲವೇ ನಿನ್ನ ತಂದೆಯು ನಿನ್ನ ತಾಯಿಯನ್ನು ಕೈಹಿಡಿದು ನಿನ್ನನ್ನು ಹಡೆದದ್ದು ? ಮದುವೆನಿಯಮಗಳನ್ನು ಕುರಿತು ನಮ್ಮ ನಗರದಲ್ಲಿ ವಿಧಿಸಲ್ಪಟ್ಟಿರುವ ವಿಷಯಗಳ ಮೇಲೆ ನಿನ ಗೇನಾದರೂ ಆಕ್ಷೇಪಣೆಯುಂಟೇ ಹೇಳು ? " ಎಂದು ನನ್ನನ್ನು ಕೇಳಿದರೆ ನಾನು ಏನೂ ಇಲ್ಲವೆಂದಲ್ಲವೇ ಹೇಳ ಬೇಕು ? ಮತ್ತೂ " ಮಕ್ಕಳನ್ನು ಹಡೆಯುವುದರಲ್ಲಿ ನಿನ್ನನ್ನೂ ನಗರದಲ್ಲಿನ ಇತರ ಮಕ್ಕಳನ್ನೂ ಕಾಯುತ್ತಿ ರುವ ನಮ್ಮ ಶಾಸನಗಳಮೇಲೆ ನೀನೇನಾದಾರೂ ಆಕ್ಷೇಪಣೆ ತಂದಿರುವೆಯಾ ? " ಎಂದು ಕೇಳಿದರೆ ಅದಕ್ಕೂ ನಾನೇನೂ ಹೇಳಲಾಗುವುದಿಲ್ಲ. ನಮ್ಮಿಂದ ನೀನು ಹುಟ್ಟಿ, ಬೆಳೆದು, ರಕ್ಷಿಸಲ್ಪಟ್ಟವನು. ನಮಗೆ ಮಗು ವಾಗಿಯೂ, ದಾಸನಾಗಿಯೂ, ನಿನ್ನ ಪೂರ್ವೀಕರಿದ್ದಂತೆ ನೀನು ಇರದೆ ನಮ್ಮನ್ನು ತಳ್ಳಿಹಾಕುವುದು ಧರ್ಮವೇ ? ನಿನಗಿರುವ ಸಣ್ಣ ಬಾಧ್ಯತೆಗಳೂ, ಸಣ್ಣ ಸ್ವಾತಂತ್ರ್ಯಗಳೂ ನಿನ್ನ ಮೇಲೆ ನಮಗಿರುವ ದೊಡ್ಡ ಸ್ವಾತಂತ್ರ್ಯಕ್ಕೆ ತಗ್ಗಿಯೇ ನಡೆಯಬೇಕು. ನಾವು ನಿನ್ನನ್ನು ಒಂದು ಕಷ್ಟಕ್ಕೆ ಗುರಿಮಾಡಿದರೆ ಅದಕ್ಕೆ ಪ್ರತಿಯಾಗಿ ನೀನು ನಮ್ಮನ್ನು ಒಂದು ದೊಡ್ಡಕಷ್ಟಕ್ಕೆ ಗುರಿಮಾಡಬಹುದೇ ?

ನಿನ್ನ ತಂದೆಯು ನಿನಗೆ ಒಂದು ಕೆಡಕನ್ನು ಮಾಡಿದರೆ ನೀನು ಅದಕ್ಕೆ ಹಗೆಯನ್ನು ಸಾಧಿಸುವೆಯಾ? ನೀನು ದಾಸನಾಗಿದ್ದೂ ನಿನ್ನ ಯಜಮಾನನು ನಿನಗೊಂದು ಹಿಂಸೆಯನ್ನು ಮಾಡಬಹುದೇ? ಅವರು ನಿನಗೆ ಕಷ್ಟವನ್ನು ಕೊಟ್ಟರೂ ತಿರಸ್ಕಾರಮಾಡಿದರೂ ಹೊಡೆದರೂ ಅಥವಾ ಬೇರೆ ಹಿಂಸೆಗೆ ಗುರಿಮಾಡಿದರೂ ಅದಕ್ಕೆ ಪ್ರತಿಯಾಗಿ ನೀನು ಅವರನ್ನು ಕಷ್ಟಕ್ಕೆ ಗುರಿಮಾಡುವುದಾಗಲೀ ತಿರಸ್ಕಾರ ಮಾಡುವುದಾಗಲೀ ಹೊಡೆಯುವುದಾಗಲೀ ಅಥವಾ ಬೇರೆ ಹಿಂಸೆಯನ್ನಾಗಲೀ ಯತ್ನಿಸುವೆಯಾ? ಹಾಗೆ ಯತ್ನಿಸಿದರೆ ನ್ಯಾಯವಾಗುವುದೇ? ನಿನ್ನ ದೇಶವೂ, ಸ್ವಧರ್ಮವೂ ನಿನಗೆ ತಾಯಿ ತಂದೆಯಂತೆಯೂ, ಯಜಮಾನನಂತೆಯೂ ಇರುವುವು. ಅವುಗಳಮೇಲೆ ನೀನು ಹಟ ಸಾಧಿಸಿ ಛಲ ತೀರಿಸಿಕೊಳ್ಳಲಾಗದು ನಿನ್ನನ್ನು ಕೊಂದು ನಿನ್ನ ಪ್ರಾಣ ತೆಗೆದುಕೊಳ್ಳುವುದು ನ್ಯಾಯವೆಂದೆಣಿಸಿ ಆರೀತಿ ನಾವು ಮಾಡಿದರೆ ನೀನು ಅದಕ್ಕೆ ಪ್ರತಿಯಾಗಿ ನಮ್ಮನ್ನು ಕೊಲ್ಲಬಹುದೇ? ಧರ್ಮಾಚರಣೆಗಳನ್ನು ಹೆಚ್ಚಾಗಿ ಗೌರವಿಸುವ ನೀನು ನಿನ್ನ ದೇಶಕ್ಕೂ ರಾಜ್ಯಕ್ಕೂ ಸ್ವಧರ್ಮಕ್ಕೂ ಇಂತಹ ದೊಡ್ಡ ಕೆಡಕು ಮಾಡುವುದು ಸರಿಯೇ? ನಿನ್ನ ತಾಯಿ ತಂದೆಗಳು ಇತರ ಪೂರ್ವಿಕರು ಅನೇಕರಿಗಿಂತ ನಿನ್ನ ದೇಶವು ಬಹು ದೊಡ್ಡದು, ಬಹು ಮಾನ್ಯವಾದುದು. ಸನಾತನವಾದುದು. ಪುಣ್ಯಭೂಮಿ. ದೇವತೆಗಳಿಂದಲೂ ಮಹಾತ್ಮರಿಂದಲೂ, ಗೌರವ ಹೊಂದಿರುವದೆನ್ನುವುದು ನಿಜವಲ್ಲವೇ? ನೀನು ಇದನ್ನು ತಿಳಿದಿರುವಿಯಲ್ಲವೇ? ಅಂತಹ ಸ್ವದೇಶವನ್ನೂ ಅದರ ಸ್ವಧರ್ಮವನ್ನೂ ಸ್ವರಾಜ್ಯವನ್ನೂ ನೀನು ಗೌರವಿಸದೆ, ಭಕ್ತಿಯಿಂದ ಕಾಣದೆ, ಅವುಗಳಿಗೆ ಎಂತಹ ಕೇಡೂ ಸಂಭವಿಸದಂತೆ ತಾಯಿ ತಂದೆಗಳಿಗಿಂತಲೂ ಹೆಚ್ಚಾಗಿಯೇ ಭೂಷಿಸುತ್ತಾ ಬರಬೇಕಲ್ಲವೇ? ಅವು

ನಿನ್ನ ಮೇಲೆ ಕೋಪಗೊಂಡರೂ, ನೀನು ಶಾಂತನಾಗಿಯೂ, ಭಕ್ತಿಪೂರ್ವಕವಾಗಿಯೂ, ಅವುಗಳ ಕೋಪವನ್ನು ಸನ್ಮಾರ್ಗದಲ್ಲಿ ಮಾರ್ಪಡಿಸಿ ಅಥವಾ ಅವುಗಳ ಹೇಳಿಕೆಗೆ ನೀನು ಅಡಗಿರಬೇಕಲ್ಲವೇ? ಅವು ನಿನಗೆ ಛಡೀ ಬಾರುಕೋಲು ಪ್ರಹಾರಮಾಡಿದರೂ, ಕೈಕಾಲಿಗೆ ಸಂಕೋಲೆಗಳನ್ನು ತೊಡಿಸಿದರೂ, ಅದನ್ನು ನೀನು ಸಮಾಧಾನವಾಗಿ ಸಹಿಸಿಕೊಂಡಿರಬೇಕಲ್ಲವೇ? ಯುದ್ಧಕ್ಕೆ ಹೋಗಿ ಪ್ರಾಣವನ್ನು ಕೊಟ್ಟೋ, ಗಾಯವನ್ನು ಹೊಂದಿಯೋ ಬಾ, ಎಂದರೂ ನೀನು ಸಂತೋಷವಾಗಿ ಹೋಗಬೇಕಲ್ಲವೇ? ಹಿಂತಿರುಗಿ ಬಿಡುವೆಯಾ? ಯುದ್ಧರಂಗದಲ್ಲಿಯೂ, ನ್ಯಾಯಸ್ಥಾನದಲ್ಲಿಯೂ, ಬೇರೆ ಯಾವ ಸ್ಥಳದಲ್ಲಿಯೂ, ನಿನ್ನ ದೇಶವೂ, ನಿನ್ನ ನಗರವೂ, ಏನನ್ನು ಮಾಡಬೇಕೆನ್ನುವುದೋ ನೀನು ಅದನ್ನು ಮಾಡಿಯೇ ತೀರಬೇಕು. ಅಥವಾ ಆ ಆಜ್ಞೆಗಳು ನ್ಯಾಯವಿರುದ್ಧವೆಂದು ಸಕಾರಣವಾಗಿ ತೋರಿಸಬೇಕು. ತಾಯ್ತಂದೆಗಳಿಗೆ ವಿರೋಧವಾಗಿ ದುರಾಗ್ರಹ ಮಾಡುವುದು ದೈವವಿಧಿಗೆ ವಿರುದ್ಧವು. ನಿನ್ನ ದೇಶದಮೇಲೆ ದುರಾಗ್ರಹ ನಡೆಸುವುದು ಅದಕ್ಕಿಂತಲೂ ದೊಡ್ಡ ಅಧರ್ಮ.'' ಈ ರೀತಿಯಾಗಿ ನಮ್ಮ ನಗರವೂ ನಮ್ಮ ಸ್ವಧರ್ಮವೂ ವಾದಿಸಿದರೆ ನಾನೇನು ಉತ್ತರಕೊಡಬೇಕು? ಕ್ರಿಟೋ ಹೇಳು.

ಕ್ರಿ: ನ್ಯಾಯವೆಂದು ಒಪ್ಪಿಕೊಳ್ಳುವೆನು.೧

---

೧ ಇಲ್ಲಿ ಒಂದು ಸಂದೇಹ ತೋರಬಹುದು. ಸೋಕ್ರಟೀಸನ ಉಪದೇಶವು ನ್ಯಾಯವಾದರೆ ಕಾಯಿದೆಗಳನ್ನತಿಕ್ರಮಿಸುವ ಚಳವಳಿಯೂ, ಅಸಹಕಾರ ಚಳವಳಿಯೂ, ಹೇಗೆ ನ್ಯಾಯವಾಗುವವೆಂದು ಕೇಳಬಹುದು. ಸ್ವರಾಜ್ಯ ಧರ್ಮಕ್ಕೂ ಪ್ರಜೆಗಳ ಸಮ್ಮತಿಯನ್ನು ಪಡೆಯದ ದುರಾಗ್ರಹ ಬಲದಿಂದ ನಡೆಯಿಸುವ ಪರರಾಜ್ಯದಲ್ಲಿ ಪ್ರಜೆಗಳು ಅನುಸರಿಸಬಹುದಾದ ಧರ್ಮಕ್ಕೂ ಇರುವ ಅಂತರವನ್ನು ವಿಚಾರಮಾಡಿದರೆ ಸಂದೇಹವು ಪರಿಹಾರವಾಗುವುದು.

ಸೋ: ಮತ್ತೂ ನಮ್ಮ ನಗರದೇವತೆಯು ಸ್ವಧರ್ಮದೇವತೆಯು ಹೇಳುವುದೇನೆಂದರೆ, " ನೀನು ತಪ್ಪಿಸಿಕೊಂಡು ಓಡುವುದು ನಮ್ಮನ್ನು ನಾಶಮಾಡುವಂತಹ ದುಷ್ಕಾರ್ಯವಾಗುವುದು. ನಿನಗೆ ಜನ್ಮವನ್ನಿತ್ತು, ನಿನ್ನ ಬಾಲ್ಯಾವಸ್ಥೆಯಲ್ಲಿ ನಿನ್ನನ್ನು ರಕ್ಷಿಸಿ, ನಿನಗೆ ಜ್ಞಾನ ದಾನಮಾಡಿ ವಿದ್ಯೆಯನ್ನು ಕಲಿಸಿ, ನಿನಗೆ ಬೇಕಾದ ವಸ್ತುಗಳನ್ನು ಒದಗಿಸಿಕೊಟ್ಟವರು ನಾವಲ್ಲವೇ ? ಅಲ್ಲದೆ ನಮ್ಮನ್ನು ಕಂಡು ಯಾರಿಗಾದರೂ ತೃಪ್ತಿಯಿಲ್ಲದಿದ್ದರೆ ವಯಸ್ಸು ಬಂದಮೇಲೆ ತನ್ನ ಆಸ್ತಿಯನ್ನು ತೆಗೆದುಕೊಂಡು ನಮ್ಮ ನಗರವನ್ನು ಬಿಟ್ಟು ಬೇರೆ ರಾಜ್ಯಕ್ಕೆ ಹೋಗಬಹುದೆಂದು ಅವಕಾಶವನ್ನು ಕಲ್ಪಿಸಿದೆವು. ಈ ರೀತಿಯಾಗಿ ಬಾಲ್ಯಾವಸ್ಥೆಯನ್ನು ಮೀರಿದವರಿಗೆ ಬುದ್ಧಿ ಬಂದಮೇಲೆ ಒಬ್ಬೊಬ್ಬನಿಗೂ ನಮ್ಮ ನಗರದಲ್ಲಿನ ನಿಯಮ, ಆಡಳಿತ ವ್ಯವಸ್ಥೆ, ಕಾಯಿದೆಗಳು, ನ್ಯಾಯ, ತನಗೆ ಸರಿತೋರದಿದ್ದಲ್ಲಿ, ನಗರವನ್ನು ಬಿಟ್ಟು ದೂರವಾಗಲು ಸ್ವಾತಂತ್ರ್ಯವನ್ನು ಕೊಟ್ಟಿರುವೆವಲ್ಲವೇ ? ನಮ್ಮ ಅಧೀನಪ್ರಾಂತ್ಯಗಳಿಗಾಗಲೀ ಪರರಾಜ್ಯಗಳಿಗಾಗಲೀ ಎಲ್ಲಿಗಾದರೂ ಹೋಗಬಹುದು. ಅಥೆನ್ಸಿನಲ್ಲಿಯೇ ಇದ್ದು ತೀರಬೇಕೆಂದು ಒಬ್ಬನನ್ನೂ ನಾವು ನಿರ್ಬಂಧಪಡಿಸಲಿಲ್ಲ. ಆದರೆ ನಮ್ಮ ನಗರದ ನೀತಿಪರಿಪಾಲನೆಯನ್ನೂ ಇತರ ಆಡಳಿತವ್ಯವಸ್ಥೆಯನ್ನೂ ತಿಳಿದು ವಯಸ್ಸು ಬಂದಮೇಲೂ ನಗರದಲ್ಲಿಯೇ ನೆಲೆಸುವ ಒಬ್ಬೊಬ್ಬನೂ ನಗರದ ವಿಧಿಗಳನ್ನು ಒಪ್ಪಿಕೊಳ್ಳುವವನಾಗುವನು. ಹಾಗೆ ನಮ್ಮನ್ನು ಒಪ್ಪಿಕೊಂಡು ನಮ್ಮ ನಗರದಲ್ಲಿರುವ ಒಬ್ಬನು ನಮ್ಮನ್ನು ನಿರಾಕರಿಸಿದರೆ ಅವನು ಮೂರು ದೋಷಗಳಿಗೆ ಗುರಿಯಾಗುವನು ಹೆತ್ತವರನ್ನು ಮೀರಿ ನಡೆಯುವ ದೋಷ, ಎತ್ತಿ ಬೆಳೆಸಿದವರಿಗೆ ದ್ರೋಹವನ್ನು ಮಾಡಿದ ದೋಷ, ಒಡಂಬಡಿಕೆಯಂತೆ ನಡೆಯದೆ ಸತ್ಯಮಾರ್ಗವನ್ನು ಬಿಟ್ಟು

ದೂರವಾದ ದೋಷ, ಅಂತೂ ಈ ಮೂರು ದೋಷಗಳಿಗೆ ಅವನು ಹೊಣೆಯಾಗುವನು. ನಾವು ಹೇಳಿದುದೆಲ್ಲವನ್ನೂ ಮಾಡಬೇಕೆನ್ನುವ ಹಟವನ್ನು ನಾವು ಸಾಧಿಸಲಿಲ್ಲ. ನ್ಯಾಯಸ್ಥಾನದಲ್ಲಿ ನಾವು ಹೇಳುವುದು ತಪ್ಪೆಂದು ನಿರೂಪಿಸುವ ಅವಕಾಶವನ್ನು ಕೊಟ್ಟಿರುವೆವು ಈ ಬಗೆಯ ಮೂರು ಪಾಪಗಳನ್ನು ಮಾಡಲು ನೀನು ಹಿಂತೆಗೆಯಲಿಲ್ಲ ಅಲ್ಲವೇ? ಸೋಕ್ರಟೀಸ್ ಇತರರಿಗಿಂತಲೂ ನಿನ್ನ ದೋಷವು ದೊಡ್ಡದು. ನಮ್ಮ ನಗರವನ್ನು ಬಿಟ್ಟು ನೀನು ಆಚೆ ಹೋಗದೆ ಯಾವಾಗಲೂ ಅಥೆನ್ಸಿನಲ್ಲಿಯೇ ಇರುತ್ತಿರುವಿ. ಇತರರಂತೆ ನೀನು ಆಗಾಗ್ಗೆ ಉತ್ಸವಗಳಿಗಾಗಲೀ ಜಾತ್ರೆಗಳಿಗಾಗಲೀ ಊರನ್ನು ಬಿಟ್ಟು ಹೋದವನಲ್ಲ. ಯುದ್ಧರಂಗಕ್ಕೆ ಹೋದುದನ್ನು ಬಿಟ್ಟರೆ ಯಾವಾಗಲೂ ಈ ಊರಲ್ಲೇ ನೀನು ಇರುತ್ತಿರುವೆ. ನಮ್ಮ ನಗರವೂ ಅದರ ಆಡಳಿತವೂ ನಿನಗೆ ಸಮರ್ಪಕವಾಗಿ ಇದ್ದುದರಿಂದಲ್ಲವೇ ನೀನು ಇತರ ಊರುಗಳನ್ನೂ ದೇಶಗಳನ್ನೂ ಬಯಸಿ ಹೋಗಲಿಲ್ಲ? ನಮ್ಮನ್ನು ನೀನು ಒಪ್ಪಿಕೊಂಡು ನಗರದಲ್ಲಿ ಬಾಳುತ್ತ ಇಹಸುಖಗಳನ್ನನುಭವಿಸಿರುವೆ ನಿನ್ನ ಮೇಲೆ ಮೊಕದ್ದಮೆಯಾದಾಗಲೂ ನಿನಗವಕಾಶವಿತ್ತು. ನ್ಯಾಯಸ್ಥಾನದಲ್ಲಿ ಅಥೆನ್ಸ್ ನಗರವನ್ನು ಬಿಟ್ಟು ನಗರಭ್ರಷ್ಟನಾಗುವ ದಂಡನೆಯನ್ನು ಕೊಡುವಂತೆ ನೀನು ಕೇಳಿರಬಹುದಾಗಿತ್ತು. ಅದನ್ನೂ ನೀನು ಮಾಡಲಿಲ್ಲ. ಈಗ ನೀನು ಮಾಡಲಿರುವ ಕೆಲಸವನ್ನು ಆಗಲೇ ನೀನು ನಮ್ಮ ಅನುಮತಿಯನ್ನು ಪಡೆದು ಮಾಡಬಹುದಾಗಿತ್ತಲ್ಲವೇ? ಆದರೆ ಆಗ್ಗೆ ನೀನೇನನ್ನು ಹೇಳಿದೆ? ಊರನ್ನು ಬಿಟ್ಟುಹೋಗುವುದಕ್ಕಿಂತ ನಾನು ಮರಣವನ್ನೇ ಬಯಸುವೆನು ಎಂದು ಧೈರ್ಯವಾಗಿ ಹೇಳಿದ ಮಾತನ್ನು ಈಗ ಮರೆತಿರುವೆಯಾ? ನಮ್ಮನ್ನು ಗೌರವಿಸದೆ ನಾಶಮಾಡಲು ನೋಡುತ್ತಿರುವೆ.

ಕೇವಲ ಒಬ್ಬ ಮಾನಹೀನನಾದ ಗುಲಾಮನು ತನ್ನ ಯಜಮಾನನನ್ನು ಬಿಟ್ಟು ಓಡುವಂತೆ ನಮ್ಮೊಡನೆ ನೀನು ಮಾಡಿಕೊಂಡಿರುವ ಒಡಂಬಡಿಕೆಯನ್ನು ಮೀರಿ ಅಸತ್ಯಮಾರ್ಗದಲ್ಲಿ ಹೋಗಲೆಣಿಸುವೆ. ನಮ್ಮ ಆಡಳಿತಕ್ಕೆ ಒಳಗಾಗಿರುವೆನೆಂದು ನೀನು ಒಪ್ಪಿಕೊಂಡುದು ಸುಳ್ಳೇ? ಅಥವಾ ನಿಜವೇ? ಹೇಳು" ಎಂದು ಕೇಳಿದರೆ ನಾನೇನನ್ನು ಹೇಳಬೇಕು? ಕ್ರಿಟೋ, ಒಪ್ಪಿದೆನು, ಎಂದಲ್ಲವೇ ಹೇಳಬೇಕು.

ಕ್ರಿ: ಹೌದು.

ಸೋ: ಕ್ರಿಟೋ! ಇನ್ನೂ ಆ ದೇವತೆಗಳು ಹೇಳುವುದೇನಂದರೆ, "ಸೋಕ್ರಟೀಸನೇ! ನೀನು ಮಾಡಿದ ಒಡಂಬಡಿಕೆಯನ್ನು ಮೀರಿನಡೆಯುವೆಯಲ್ಲಾ! ನಿನಗೆ ನಾವೇನಾದರು ಮೋಸವನ್ನಾಗಲೀ ಬಲವಂತವನ್ನಾಗಲೀ ಮಾಡಿ ನಮಗೆ ಅಧೀನನಾಗಿರುವಂತೆ ಪ್ರಮಾಣವನ್ನು ತೆಗೆದುಕೊಂಡಿರುವೆವೇ? ಅಥವಾ ಯೋಚನೆ ಮಾಡಲು ಸಾಕಾದಷ್ಟು ಅವಕಾಶ ಕೊಡದೆ ಆತುರದಲ್ಲಿ ನಿನ್ನಿಂದ ಮಾತು ತೆಗೆದುಕೊಂಡಿರುವೆವೇ? ಎಪ್ಪತ್ತು ವರ್ಷಗಳಾಗಿ ನೀನು ನಮ್ಮೊಡನೆ ಬಾಳುತ್ತ ಬಂದಿರುವೆ. ಈ ಎಪ್ಪತ್ತು ವರ್ಷಗಳಲ್ಲಿ ಎಂದಾದರು ನಗರದ ಆಡಳಿತವು ನಿನಗೆ ಅಸಮರ್ಪಕವಾಗಿ ಇದ್ದಿದ್ದರೆ ನಗರವನ್ನು ಬಿಟ್ಟು ನೀನು ಹೋಗಿರುವೆ ಒಡಂಬಡಿಕೆಯನ್ನು ರದ್ದುಮಾಡಿಕೊಂಡಿರುವೆ. ಪರರಾಜ್ಯಗಳು ಅಥೆನ್ಸಿಗಿಂತ ಸಮರ್ಪಕವಾಗಿರುವವೆಂದು ನಿನಗೆ ತೋರಿದರೆ ಅಲ್ಲಿಗೆ ಹೋಗಲು ನಿನಗೆ ಎಪ್ಪತ್ತು ವರ್ಷಗಳ ಅವಧಿ ಇದ್ದಿತು. ಗ್ರೀಸ್ ದೇಶವನ್ನೆ ಬಿಟ್ಟು ಅನ್ಯದೇಶಗಳಿಗೆ ನೀನು ಹೋಗಬಹುದಾಗಿತ್ತು. ಕುಂಟನಾಗಲೀ ಕುರುಡನಾಗಲೀ ಅಂಗವಿಹೀನನಾಗಲೀ ಊರನ್ನು ಬಿಟ್ಟು ಕೆಲವು ದಿನ ಪರದೇಶಕ್ಕೆ ಹೋದರೂ ನೀನು ಮಾತ್ರ ಈ ಊರನ್ನು

ಬಿಟ್ಟುಹೋದುದಿಲ್ಲವಲ್ಲಾ. ಈಗ ನಾವು ಹೇಳುವು ದನ್ನು ಕೇಳು. ಮಾಡಿದ ಪ್ರಮಾಣವನ್ನು ಮರೆಯಬೇಡ. ಊರನ್ನು ಬಿಟ್ಟೋಡಬೇಡ. ನಮಗೆ ದ್ರೋಹಮಾಡ ಬೇಡ.

ಸೋಕ್ರಟೀಸ್! ವಿಚಾರ ಮಾಡಿನೋಡು. ಈ ಅನ್ಯಾಯಪ್ರವರ್ತನೆಯಿಂದ ನೀನು ಯಾವ ನಲ್ಮೆಯನ್ನು ಪಡೆಯುವಿ? ಅಥವಾ ನಿನ್ನ ಮಿತ್ರರು ಏನು ಲಾಭವನ್ನು ಹೊಂದುವರು. ನಿನಗೆ ಸಹಾಯ ಮಾಡಿ ನಿನ್ನನ್ನು ಸೆರೆಯಿಂದ ತಪ್ಪಿಸುವ ದೊಡ್ಡ ಅಪರಾಧಕ್ಕಾಗಿ ಅವರೂ ನಗರಭ್ರಷ್ಟರಾಗಬಹುದು. ದೇಶಭ್ರಷ್ಟರಾಗಬಹುದು. ಅವರ ಆಸ್ತಿಯನ್ನು ವಶಪಡಿಸಿಕೊಳ್ಳಬಹುದು ನೀನು ನೆರೆ ರಾಜ್ಯದಲ್ಲಿನ ಒಂದು ನಗರಕ್ಕೆ ಹೋಗುವಿಯೆಂದೆಣಿಸೋಣ. ನೀನು ಹೋದ ಸ್ಥಳದಲ್ಲೆಲ್ಲಾ ಆ ದೇಶದ ಆಡಳಿತಕ್ಕೆ ವಿರೋಧಿಯೆಂದು ಗಣಿಸಲ್ಪಡುವೆ. ತಮ್ಮ ತಮ್ಮ ರಾಜ್ಯದಲ್ಲಿ ಮಮತೆಯನ್ನೂ ಭಕ್ತಿಯನ್ನೂ ಇಟ್ಟುಕೊಂಡಿರುವವರು ನಿನ್ನನ್ನು ಏನೆಂದು ಭಾವಿಸುವರು? ನೀನು ಕಾಯಿದೆಗಳನ್ನತಿಕ್ರಮಿಸಿ ರಾಜ್ಯದ ಆಡಳಿತವನ್ನು ನಿರಾಕರಿಸಿ ಬಂದವನೆಂದೇ ಎಲ್ಲರೂ ನಿನ್ನನ್ನು ಗಣಿಸುವರು. ತನ್ನ ತಾಯ್ನಾಡಿನ ಆಡಳಿತಕ್ಕೆ ವಿರೋಧ ಮಾಡಿದವನು ಯುವಕರಿಗೂ ಬುದ್ಧಿಹೀನರಿಗೂ ದುರ್ಬೋಧನೆಯನ್ನು ಮಾಡಿ ಕೆಡಿಸಬಹುದೆಂದೇ ಎಣಿಸುವರು. ನಿನ್ನ ಮೇಲೆ ಮೇಲೇಟಸ್ಸನು ಆರೋಪಿಸಿದ ಅಪರಾಧವು ಸತ್ಯವೇ ಆಗುವುದು, ಮಾಡಿದ ತೀರ್ಮಾನವು ನ್ಯಾಯವಾಗುವುದು. ನೀನು ಎಲ್ಲಿಗೆಂದು ಹೋಗುವೆ? ತಮ್ಮ ತಮ್ಮ ರಾಜ್ಯಗಳಲ್ಲಿ ಭಕ್ತಿಯಿಲ್ಲದ ಜನರೆಲ್ಲರೂ ಸೇರಿದ ಅರಾಜಕ ಸ್ಥಳಗಳನ್ನು ಹುಡುಕಿಹೋಗುವೆಯಾ? ತಮ್ಮ ದೇಶದ ಆಡಳಿತದಲ್ಲೂ, ಸ್ವಧರ್ಮದಲ್ಲೂ, ಭಕ್ತಿರಹಿತ

ರಾದವರೊಡನೆ ಮಾತಾಡಿ ತಿರುಗುವೆಯಾ? ಅವರೊಡನೆ ನೀನು ಏನು ಸಂಭಾಷಣೆಯನ್ನು ಮಾಡಿ ಕಾಲಹರಣ ಮಾಡುವೆ? ಧರ್ಮವನ್ನು ಕುರಿತು ಮಾತಾಡುವೆಯೊ? ನ್ಯಾಯ, ನೀತಿ, ರಾಜ್ಯಶಾಸ್ತ್ರ, ರಾಜ್ಯಾಡಳಿತ, ಸ್ವರಾಜ್ಯ ಇವುಗಳನ್ನು ಕುರಿತು ಮಾತನಾಡಲು ನಿನಗೆ ನಾಲಿಗೆ ಬರುವುದೇ?

ಇನ್ನೂ ವಿಚಾರಿಸಿ ನೋಡು. ರಾಜಭಕ್ತಿರಹಿತವಾದ ಊರು ಒಂದನ್ನು ಹುಡುಕಿ, ನೀನು ಮಾಡಿದ ಅಪರಾಧ ವನ್ನು ದೊಡ್ಡದೆಂದು ಎಣಿಸದ ಸ್ಥಳ ಒಂದನ್ನು ನೋಡಿ ಹೋಗುವೆಯೆಂದಿಟ್ಟುಕೊಳ್ಳೋಣ. ಅಲ್ಲಿನ ಜನರು ನಿನ್ನ ಕಥೆಯನ್ನು ಕೇಳಿ ಆನಂದಪಡುವರು. ಸೋಕ್ರಟೀಸನು ವೇಷಾಂತರವನ್ನು ಹಾಕಿ, ಮೋಸಮಾಡಿ, ಓಡಿಹೋದ ಕಥೆಯನ್ನು ಕೇಳಿ, ನಕ್ಕು, ಸಂತೋಷಪಡುವರು. ಆದರೆ ಒಬ್ಬಿಬ್ಬರಾದರೂ ನಿನ್ನನ್ನು ಕೇಳುವರಲ್ಲವೇ? "ಅಯ್ಯಾ! ಮುದುಕರೇ! ನೀವಿನ್ನೂ ಎಷ್ಟು ದಿನ ಬದುಕಿರಬೇಕೆಂದು ಆಶೆಪಟ್ಟು ಈ ರೀತಿಯಾಗಿ ನಿಮ್ಮ ರಾಜ್ಯಕ್ಕೆ ವಿರೋಧ ಮಾಡಿ ಓಡಿ ತಲೆ ತಪ್ಪಿಸಿಕೊಂಡಿರುವಿರಿ?" ಹೀಗೆ ಒಬ್ಬರು ಕೇಳಿದರೆ ನಿನಗೆ ನಾಚಿಕೆಯಾಗುವುದಿಲ್ಲವೇ? ಈರೀತಿ ನೀನು ನಾಚಿಕೆಪಡುವಂತಹ ಪ್ರಶ್ನೆಗಳನ್ನು ಯಾರೂ ನಿನ್ನನ್ನು ಕೇಳದಿರುವಂತೆ ಮಾಡಲು ನೀನು ನೋಡಿದವರೆಲ್ಲರನ್ನೂ ಮುಖಕೊಟ್ಟು ಮಾತನಾಡಿಸಿ ಸಂತೋಷಪಡಿಸಿ ಎಲ್ಲರ ಮುಂದೆಯೂ ನಟಿಸಬೇಕಾಗುವುದು. ಹೀಗೆ ಕಾಲವನ್ನು ಕಳೆದು ಏನು ಸುಖವನ್ನು ಹೊಂದಲಪೇಕ್ಷಿಸುವೆ? ಒಳ್ಳೆಯ ತಿಂಡಿಗಳನ್ನು ತಿನ್ನುವುದರಲ್ಲಿ ಕಾಲವನ್ನು ಕಳೆಯುವೆಯಾ? ಇದಕ್ಕೋ ಧರ್ಮವನ್ನು ಕುರಿತೂ ಒಳ್ಳೆಯುದನ್ನು ಕೆಟ್ಟದ್ದನ್ನು ಕುರಿತೂ ಇಷ್ಟು

ಮಾತುಗಳನ್ನು ನೀನು ಆಡುತ್ತ ಬಂದದ್ದು? ಒಂದುವೇಳೆ ನಿನ್ನ ಮಕ್ಕಳಿಗಾಗಿ ಪ್ರಾಣವನ್ನು ತಪ್ಪಿಸಿಕೊಂಡು ಹೋಗಬಹುದೆಂದು ನೀನು ಭಾವಿಸುವೆಯಾ? ತಾನು ಹುಟ್ಟಿದ ನಗರದಿಂದ ಭ್ರಷ್ಟನಾಗುವುದು ಮಾತ್ರವಲ್ಲದೆ ನಿನ್ನ ಮಕ್ಕಳನ್ನೂ ಹಾಗೆಯೇ ಮಾಡಲು ನೋಡುವೆಯಾ? ಒಂದುವೇಳೆ ಅವರನ್ನೂ ಆಥೆನ್ಸಿನಲ್ಲಿಯೇ ಬಿಟ್ಟು ಹೋಗುವೆಯೇನೋ? ಅವರೊಡನೆ ನೀನಿಲ್ಲದೆ ನೀನೆಲ್ಲಿಯೋ ಪ್ರಾಣದಿಂದಿರುವ ಮಾತ್ರದಿಂದ ಏನು ವಿದ್ಯೆಯನ್ನು ಅಧಿಕವಾಗಿ ಕಲಿಯುವರು? ನೀನು ಪ್ರಾಣದೊಡನೆ ಇಲ್ಲದಿದ್ದರೂ ಅವರು ಅಷ್ಟೇ ಕಲಿಯುವರು. ನಿನ್ನ ಮಿತ್ರರು ಅವರನ್ನು ನೋಡಿಕೊಳ್ಳುವರೆಂದು ನೀನು ಭಾವಿಸುವುದು ಸರಿಯೇ ಆದರೆ ಅವರು ನೀನು ಪ್ರಾಣದಿಂದಿದ್ದರೆ ನೋಡಿಕೊಳ್ಳುವರೇ? ನೀನು ಪ್ರಾಣಬಿಟ್ಟರೆ ನೋಡಿಕೊಳ್ಳಲಾರರೆ? ನಿನ್ನ ಮಿತ್ರರಲ್ಲಿ ನಿನಗೆ ಸಾಕಷ್ಟು ನಂಬಿಕೆ ಇಲ್ಲವೆಂದು ತೋರುತ್ತದೆ. ಸೋಕ್ರಟೀಸನೇ, ಕೇಳು. ಮಕ್ಕಳೂ, ಪ್ರಾಣವೂ ಯಾವುದೂ ನ್ಯಾಯಕ್ಕಿಂತ ದೊಡ್ಡದಲ್ಲ. ನ್ಯಾಯವನ್ನು ತಪ್ಪಿದರೆ ಯಮನ ಮುಂದೆ ನಿಲ್ಲುವ ಕಾಲದಲ್ಲಿ ಏನು ಉತ್ತರವನ್ನು ಕೊಡುವೆ? ನೀನು ಈಗ ಓಡಿ ಹೋಗುವುದಾದರೆ ನಿನಗೂ ಸುಖವಿಲ್ಲ, ನಿನ್ನ ಮಿತ್ರರಿಗೂ ಸುಖವಿಲ್ಲ. ಯಾವ ರೀತಿಯ ಒಳ್ಳೆಯದನ್ನಾಗಲೀ ಪುಣ್ಯವನ್ನಾಗಲೀ ನೀನೂ ನಿನ್ನ ಮಿತ್ರರೂ ಹೊಂದಲಾರಿರಿ. ಈಗ ನೀನು ಮರಣವನ್ನು ಹೊಂದಿದರೆ ನೀನನುಭವಿಸಿದ ಕಷ್ಟಕ್ಕೆ ಕಾರಣಕರ್ತರು ಅನ್ಯಾಯ ಮಾಡಿದವರೇ ಹೊರತು, ನ್ಯಾಯ, ನಗರ, ಸ್ವಧರ್ಮ, ಇವುಗಳು ನಿನಗೆ ಒಂದು ದ್ರೋಹವನ್ನೂ ಮಾಡಿದಂತಾಗುವುದಿಲ್ಲ. ನಿನ್ನಮೇಲೆ ಅವುಗಳನ್ನು ಪ್ರಯೋಗಿಸಿದ

ಜನಗಳೇ ನಿನ್ನನ್ನು ಅನ್ಯಾಯಕ್ಕೆ ಬಲಿ ಕೊಟ್ಟವರಾಗು ವರು. ಇದಕ್ಕೆ ನೀನು ಮಾಡಬೇಕಾದುದೇನು? ನಿನ್ನ ಪಾಲಿಗೆ ಅಧರ್ಮವು ಮಾಡಲ್ಪಟ್ಟದ್ದರಿಂದ ನೀನಧರ್ಮಕ್ಕೆ ಇಳಿಯಬಹುದೇ? ಕೆಟ್ಟ ಕೆಲಸಕ್ಕೆ ಪ್ರತಿಯಾಗಿ ನೀನೂ ಕೆಟ್ಟ ಕೆಲಸವನ್ನು ಮಾಡಿ, ಅಪಮಾನಕ್ಕೆ ಗುರಿಯಾಗಿ ನಿನ್ನ ಮಿತ್ರರೂ, ನೀನೂ, ಮೇಲ್ಮೆಯನ್ನು ಬಿಟ್ಟು, ಸುಖ ವನ್ನು ಬಿಟ್ಟು, ನಿನ್ನ ದೇಶಕ್ಕೂ ಸ್ವಧರ್ಮಕ್ಕೂ ಕೇಡೆಣಿಸಿ ಹೇಗಾದರೂ ಪ್ರಾಣವನ್ನುಳಿಸಿಕೊಳ್ಳುವುದು ದೊಡ್ಡದೆಂ ದೆಣಿಸಬೇಡ. ಹಾಗೆ ಮಾಡುವುದೇ ಆದರೆ ನಗರಧರ್ಮ ವನ್ನು ನಾಶಮಾಡಿದ ನೀನೂ ಉತ್ತರೋತ್ತರ ಯಮ ನಲ್ಲಿ ಹೇಳುವಾಗ ಧರ್ಮಸ್ವರೂಪನಾದ ಅವನು ಹೇಗೆ ನಿನ್ನನ್ನು ಆದರಿಸುವನು? ಕ್ರಿಟೋ ಹೇಳುವುದನ್ನು ಕೇಳ ಬೇಡ. ನಾವು ಹೇಳುವುದನ್ನು ಕೇಳು. ಕೆಟ್ಟುಹೋಗ ಬೇಡ.''

ಕ್ರಿಟೋ! ಈರೀತಿಯಾಗಿ ನಮ್ಮ ಸ್ವರಾಜ್ಯವೂ, ಸ್ವಧರ್ಮ ವೂ ನನಗೆ ಕಾಣಿಸಿಕೊಂಡು ನನ್ನ ಕಿವಿಯಲ್ಲಿ ಹೇಳುತ್ತಿವೆ. ಆ ಧರ್ಮೋಪದೇಶವು ಇತರ ಮಾತುಗಳನ್ನೆಲ್ಲವನ್ನು ಅಳಿಸಿ ಹಾಕಿ ನನ್ನ ಕಿವಿಯಲ್ಲಿ ಧ್ವನಿಸುತ್ತಿದೆ. ಹೀಗಿರಲು ನೀನೇತಕ್ಕೆ ವ್ಯರ್ಥವಾಗಿ ಪ್ರಾಣ ಉಳಿಸಿಕೊಂಡು ಓಡ ಹೋಗಬೇಕೆಂದು ನನಗೆ ಹೇಳುವೆ? ನನ್ನ ಮನಸು ಸ್ಥಿರವಾಗಿದೆ. ಮಾರ್ಪಡಿಸಬಹುದೆಂದು ಇನ್ನೂ ತಿಳಿದಿ ದ್ದರೆ ಹೇಳು. ನಾನು ಬೇಡವೆನ್ನುವುದಿಲ್ಲ.

ಕ್ರಿ : ನಾನು ಬೇರೆ ಏನುತಾನೆ ಹೇಳಲಾದೀತು? ನನ್ನ ಮಾತು ಮುಗಿಯಿತು.

ಸೋ : ಕ್ರಿಟೋ! ದೈವಾಜ್ಞೆಗೆ ಅಧೀನರಾಗಿ ಧೈರ್ಯವನ್ನು ತಾಳುವ.

# ಸೋಕ್ರಟೀಸನ ಮರಣ

## ಎಖೀಕ್ರಾಟಿಸ್ ಫೈಡೋ ಸಂಭಾಷಣೆ

**ಎಖೀಕ್ರಾಟಿಸ್ :** ಸೋಕ್ರಟೀಸನ ಮರಣ ಕಾಲದಲ್ಲಿ ನೀವು ಜೊತೆಯಲ್ಲಿದ್ದಿರಾ? ಅಥವಾ ವೃತ್ತಾಂತವನ್ನು ಇತರರಿಂದ ಕೇಳಿ ತಿಳಿದುಕೊಂಡಿರಾ?

**ಫೈಡೋ :** ನಾನು ಜೊತೆಯಲ್ಲೇ ಇದ್ದೆನು.

**ಎ :** ಹಾಗಾದರೆ ನಮ್ಮ ಗುರುಗಳು ಅಂತ್ಯಕಾಲದಲ್ಲಿ ಏನು ಹೇಳಿದರು? ಹೇಗೆ ಪ್ರಾಣ ಬಿಟ್ಟರು? ಎಲ್ಲವನ್ನೂ ವಿವರಿಸಿ. ಅವರ ಮರಣ ವೃತ್ತಾಂತವನ್ನು ಕೇಳುವುದಕ್ಕೆ ಅಧಿಕ ಆಶೆಯುಳ್ಳವನಾಗಿರುವೆನು. ಆಥೆನ್ಸಿನಿಂದ ಬಹು ದಿನಗಳಾಗಿ ಯಾರೂ ನಮ್ಮೂರಿಗೆ[1] ಬರಲಿಲ್ಲ! ಸಮಾಚಾರವನ್ನು ಸರಿಯಾಗಿ ಹೇಳುವವರಿಲ್ಲ. ಅವರು ವಿಷವನ್ನು ಕುಡಿದರು[2], ಮೃತರಾದರು ಎನ್ನುವ ಮಾತನ್ನು ಹೊರತು ಹೆಚ್ಚಿನ ವಿವರಗಳು ಏನೂ ತಿಳಿಯದು........ ............ಆಪ್ತರು ಯಾರಾದರೂ ಆ ಮಹನೀಯರೊಡನೆ ಇದ್ದರೇ? ಅಥವಾ ಯಾರನ್ನೂ ಅಧಿಕಾರಿಗಳು ಬಿಡಲಿಲ್ಲವೇ?

---

೧. ಈ ಸಂಭಾಷಣೆಯು ಫ್ಲಿಯುಸ್ ಎಂಬ, ಬೇರೆ ಗ್ರೀಕ್ ಪ್ರಾಂತ್ಯದಲ್ಲಿರುವ ಊರಿನಲ್ಲಿ ನಡೆಯಿತು.

೨. ಮರಣದಂಡನೆಯೆಂದರೆ ದೇಶಕಾಲಗಳಿಗನುಸಾರವಾಗಿ ಅನೇಕ ರೀತಿಯಾಗಿರುವವು. ಆಥೆನ್ಸ್‌ನಗರದಲ್ಲಿ ಸೋಕ್ರಟೀಸನ ಕಾಲದಲ್ಲಿ ಮರಣದಂಡನೆಯೆಂದರೆ ಅಪರಾಧಿಗೆ ಬಹು ಶೀಘ್ರವಾಗಿ ಮರಣ ಹೊಂದಿಸುವಂತಹ ಕಠೋರವಾದ ವಿಷಪಾನವನ್ನು ಕೊಟ್ಟು ಅದನ್ನು ಅವನು ಕುಡಿಯುವಂತೆ ಮಾಡುವುದು ಕ್ರಮವಾಗಿತ್ತು.

ಫೈ: ಹಾಗಲ್ಲ. ಅನೇಕ ಮಿತ್ರರು ಜೊತೆಯಲ್ಲೇ ಕೊನೆಯು ವರೆಗೂ ಇದ್ದರು.

ಎ: ನಡೆದುದೆಲ್ಲವನ್ನೂ ವಿವರಿಸಬೇಕೆಂದು ಕೋರುತ್ತೇನೆ. ನಿಮಗವಕಾಶವುಂಟೇ? ಅಥವಾ ಏನಾದರೂ ತೊಂದರೆ ಉಂಟೊ?

ಫೈ: ತೊಂದರೆಯೇನೂ ಇಲ್ಲ. ನಡೆದುದೆಲ್ಲವನ್ನು ಹೇಳುತ್ತೇನೆ. ಸೋಕ್ರಟೀಸರ ವಿಷಯವನ್ನು ಹೇಳುವುದಾಗಲೀ ಕೇಳುವುದಾಗಲೀ ಮನಸ್ಸಿಗೆ ಆನಂದದಾಯಕವು; ಕೇಳಿ. ನಾನು ಆದಿನ ಜೊತೆಯಲ್ಲೇ ಇದ್ದೆನು. ನನ್ನ ಮನಸು ಸ್ವಾಸ್ಥ್ಯವಿಲ್ಲದೆ ಒಂದು ರೀತಿಯ ಕಳವಳದಲ್ಲಿತ್ತು. ಒಬ್ಬ ದೊಡ್ಡ ಮಿತ್ರರ ಮರಣಕಾಲದಲ್ಲಿ ಉಂಟಾಗ ಬೇಕಾದ ದುಃಖವೇ ತೋರಲಿಲ್ಲ. ಅವರ ಮನಸ್ಥೈರ್ಯ ವನ್ನೂ ಆನಂದವನ್ನೂ ಕಂಡು ನನ್ನ ಮನಸ್ಸಿನಲ್ಲಿ ದುಃಖವೇ ಹುಟ್ಟಲಿಲ್ಲ. ಆಹಾ! ಏನು ಧೈರ್ಯ! ಏನು ಗಂಭೀರವಾಗಿ ಪ್ರಾಣವನ್ನು ತೊರೆದರು! ದೇವತೆ ಗಳೆಲ್ಲರೂ ಅವರನ್ನು ಸುತ್ತಿನಿಂತು ಅವರ ಆತ್ಮವು ಬಿಡು ಗಡೆ ಹೊಂದುವುದನ್ನು ನೋಡುವುದಕ್ಕೆ ಬಂದು ಕಾದಿರು ವಂತೆ ತೋರಿತು. ಸದ್ಗತಿಯನ್ನು ಹೊಂದಿ ಆನಂದಪದವಿ ಯನ್ನು ಹೊಂದುವವರಿಗೆ ದುಃಖವೇ ಇಲ್ಲವೆನ್ನುವುದು ಪ್ರತ್ಯಕ್ಷ ನಿದರ್ಶನಕ್ಕೆ ಬಂದಿತು. ಸಾಧಾರಣವಾಗಿ ಅಧ್ಯಾತ್ಮ ವಿಚಾರಗಳನ್ನು ಕುರಿತು ಅವರು ಸಂಭಾಷಿಸಿ ದರೆ ಮನಸ್ಸಿನಲ್ಲಿ ಒಂದು ವಿಧವಾದ ಉತ್ಸಾಹವು ನನ್ನಲ್ಲಿ ಉಂಟಾಗುವುದು. ಅಂದು ಅವರು ಅಧ್ಯಾತ್ಮ ವಿಚಾರ ವಾಗಿಯೇ ಮಾತನಾಡಿದರು. ಆದರೂ ನನಗೆ ಆ ವಿಧ ವಾದ ಉತ್ಸಾಹವು ಉಂಟಾಗಲಿಲ್ಲ. ವ್ಯಸನವೂ ಆನಂ ದವೂ ಬೆರತು ಒಂದು ವಿಚಿತ್ರವಾದ ಮನೋಭಾವವು ನನ್ನ

ನ್ನಾವರಿಸಿತು. ಅಲ್ಲಿದ್ದವರೆಲ್ಲರೂ ಹೀಗೆಯೇ ಇದ್ದರು. ಒಮ್ಮೆ ನಗುವುದು, ಮತ್ತೊಮ್ಮೆ ಅಳುವುದು ಹೀಗೆ ಸ್ವಾಧೀನ ತಪ್ಪಿ ನಮ್ಮ ಮನಸ್ಸು ವಿಚಿತ್ರಾವಸ್ಥೆಯಲ್ಲಿತ್ತು.

ಮೊದಲಿನಿಂದಲೂ ಹೇಳುತ್ತೇನೆ ಕೇಳಿ. ಸಾಮಾನ್ಯವಾಗಿ ನಾನೂ ಕೆಲವು ಮಿತ್ರರೂ ದಿನವಹಿ ಬೆಳಿಗ್ಗೆ ಕಾರಾಗೃಹದ ಪಕ್ಕದಲ್ಲಿದ್ದ ಒಂದು ವ್ಯಾಯಾನದಲ್ಲಿ ಸೇರಿ ಮಾತನಾಡುತ್ತಿದ್ದು, ಕಾರಾಗೃಹದ ಬಾಗಿಲು ತೆಗೆದಕೂಡಲೇ ಒಳಗೆ ಹೋಗುತ್ತಿದ್ದೆವು. ಹಿಂದಿನ ಸಂಜೆ ಡೀಲಾಸ್ ದ್ವೀಪದಿಂದ ದೇವರ ಗುಡಿಗೆ ಕಾಣಿಕೆಯನ್ನರ್ಪಿಸಿ ಹಡಗು ತಿರುಗಿ ಅಥೆನ್ಸ್ ಸೇರಿತೆಂಬ ಸಮಾಚಾರವನ್ನು ತಿಳಿದಿದ್ದೆವಾದುದರಿಂದ ಆದಿನ ಉಷಃಕಾಲಕ್ಕೇ ಹೋದೆವು. ನಾವು ಕಾರಾಗೃಹಕ್ಕೆ ಹೋದಕೂಡಲೇ ಬಾಗಿಲು ಕಾಯುವವನು ಬಂದು "ಸ್ವಲ್ಪ ತಡೆಯಿರಿ. ಅಧಿಕಾರಿಗಳು ಬಂದು ಸೋಕ್ರಟೀಸರ ಕಾಲು ಸಂಕೋಲೆಗಳನ್ನು ಬಿಚ್ಚಿ, ಅವರಿಗೆ ಇಂದು ವಿಷಪಾನವನ್ನು ಕೊಡಬೇಕೆಂದು ಆಜ್ಞೆ ಮಾಡುತ್ತಿರುವರು. ಅವರು ಹೋದಮೇಲೆ ನೀವು ಬರಬಹುದು." ಎಂದು ಹೇಳಿಹೋದನು. ಸ್ವಲ್ಪ ಹೊತ್ತಾದನಂತರ ಅವನು ಮತ್ತೆ ಬಂದು ನಮ್ಮನ್ನು ಒಳಗೆ ಕರೆದುಕೊಂಡು ಹೋದನು. ಆಗತಾನೆ ಸಂಕೋಲೆಗಳು ತೆಗೆಯಲ್ಪಟ್ಟಿದ್ದವು. ಸೋಕ್ರಟೀಸರ ಹೆಂಡತಿಯು ಕೂಸನ್ನು ಕೈಯಲ್ಲೆತ್ತಿಕೊಂಡು ಪಕ್ಕದಲ್ಲಿ ಕುಳಿತಿದ್ದಳು. ನಮ್ಮನ್ನು ನೋಡಿದಕೂಡಲೇ ಅವಳು ಕಣ್ಣೀರುಬಿಟ್ಟು "ಅಯ್ಯೋ! ನಿಮ್ಮ ಮಿತ್ರರರೊಡನೆ ನೀವು ಮಾತನಾಡುವುದು ಇದೇ ಕಡೆಯ ದಿನವಾಯಿತಲ್ಲ" ಎಂದು ಹೇಳಿ ಅಳಲಾರಂಭಿಸಿದಳು. "ಕ್ರಿಟೋ ಇವಳನ್ನು ಮನೆಗೆ ಕರೆದುಕೊಂಡು ಹೋಗು" ಎಂದು ಸೋಕ್ರಟೀಸರು ಹೇಳಿದಕೂಡಲೇ

ಕ್ರಿಟೋವಿನ ಆಳುಗಳು ಅವಳನ್ನು ಕರದುಕೊಂಡು ಹೋದರು. ಆವಳು ಬಿಕ್ಕಿಬಿಕ್ಕಿ ಅಳುತ್ತ, ಎದೆ ಹೊಡೆದು ಕೊಳ್ಳುತ್ತ, ಪ್ರಲಾಪಿಸುತ್ತ ಮನೆಗೆ ಹೋದಳು. ಸೋಕ್ರ ಟೀಸರು ತಮ್ಮ ಹಾಸಿಗೆಯಮೇಲೆ ಕುಳಿತು, ಕಾಲು ಗಳನ್ನು ಮೆಲ್ಲಗೆ ಸವರುತ್ತ "ಈ ಆಶ್ಚರ್ಯವನ್ನು ನೋಡಿ. ಸುಖವೂ ದುಃಖವೂ ಪರಸ್ಪರ ವಿರೋಧವಾಗಿದ್ದು ಎರಡೂ ಸೇರುವುದಕ್ಕಾಗದಿದ್ದರೂ ದೇವರು ಅವುಗಳನ್ನು ಒಂದರ ಹಿಂದೆ ಒಂದು ತಪ್ಪದೆ ಬರುತ್ತಿರುವಂತೆ ವಿಧಿಸಿರುವನು. ಮನುಷ್ಯನಿಗೆ ಒಂದು ಬಂದರೆ ಮತ್ತೊಂದು ತಪ್ಪದೆ ಅದರ ಹಿಂದೆ ಬರುವುದು. ಇಷ್ಟುದಿನ ಈ ಕಾಲಿನ ಸಂಕೋಲೆ ಗಳು ಬಹು ಯಾತನೆಯನ್ನುಂಟುಮಾಡಿದವು. ಈಗ ತೆಗೆದುಹಾಕಿದಮೇಲೆ ಎಷ್ಟು ಸುಖವಾಗಿರುವುದು!" ಎಂದು ಹೇಳಿದರು ...................................

"ಎವೇನಸ್ಸರು ನನ್ನನ್ನು ಕುರಿತು ವಿಚಾರಿಸಿದರೆ? ಬಹಳ ಸಂತೋಷ. ಅವರಿಗೆ ನನ್ನ ನಮಸ್ಕಾರಗಳನ್ನು ಹೇಳಿ. ಆತನು ಒಳ್ಳೇ ಜ್ಞಾನಿಯಲ್ಲವೇ? ಆತನನ್ನು ಶೀಘ್ರ ದಲ್ಲಿಯೇ ನನ್ನನ್ನು ಹಿಂಬಾಲಿಸಿ ಬರುವಂತೆ ಹೇಳಿ. ಇಂದು ನಾನು ನಿಮ್ಮನ್ನು ಬಿಟ್ಟುಹೋಗಬೇಕಾದ ದಿನ. ಅಧಿಕಾರಿಗಳು ಆಜ್ಞೆಯನ್ನು ಮಾಡಿಬಿಟ್ಟಿರುವರು."

ಆಗ ಸಿಮ್ಮಿಯಸ್ಸನು "ಇದೇನು ಹೀಗೆ ಹೇಳುತ್ತೀರಿ? ಎವೇನಸ್ಸನನ್ನು ನಾನು ಬಲ್ಲೆನು. ಅವನು ಮರಣ ಹೊಂದಲು ಆಶೆ ಪಡುವವನಲ್ಲ" ಎಂದು ಹೇಳಿದನು.

"ಏನು! ಎವೇನಸ್ಸನು ತತ್ವಜ್ಞಾನ ಹೊಂದಿದವ ನೆಂದು ಕೇಳಿರುವೆನಲ್ಲ! ಅದು ಸುಳ್ಳೇ? ಪ್ರತಿಯೊಬ್ಬ ಜ್ಞಾನಿಯೂ ಈ ದೇಹವನ್ನು ಬಿಟ್ಟುಹೋಗಲು ಇಷ್ಟ

ಪಡುವನು. ಆದರೆ ಬಲವಂತವಾಗಿ ಪ್ರಾಣವನ್ನು (ಆತ್ಮ ಹತ್ಯದಿಂದ) ಕಳೆದುಕೊಳ್ಳಲಾರನು. ಅದು ತಪ್ಪಾಗುವುದು.'' ಹೀಗೆ ಹೇಳಿ ಕಾಲುಗಳನ್ನು ಚಾಚಿ ಕುಳಿತುಕೊಂಡರು.

ಕೆಬೀಸ್: ಏತಕ್ಕೆ ಅದು ಮಾತ್ರ ತಪ್ಪಾಗುವುದು? ಹೇಳಬೇಕು.

ಸೋಕ್ರಟೀಸ್: ಇದೊಂದು ಗೂಢವಾದ ತತ್ವ೧. ದೇಹವು ದೇವರು ನಮಗೆ ಕೊಟ್ಟ ಒಂದು ಕಾರಾಗೃಹವಾಸದಂತೆ. ಆದರಿಂದ ನಾವಾಗಿಯೇ ತಪ್ಪಿಸಿಕೊಂಡು ಹೋಗಬಾರದು. ದೇವರೇ ಬಿಡುಗಡೆ ಮಾಡಬೇಕು. ಹೀಗೆ ಕೆಲವು ಜ್ಞಾನಿಗಳು ಹೇಳುವರು. ಇದರ ನಿಜಾಂಶವನ್ನು ತಿಳಿಯುವುದು ಕಷ್ಟವಾಗಿರಬಹುದು. ನಾನು ಹೇಳುವುದೇನೆಂದರೆ ನಾವೆಲ್ಲರೂ ದೇವರ ರಕ್ಷಣೆಯಲ್ಲಿರುವೆವು. ನಾವು ಅವನ ಸ್ವತ್ತು. ನಮ್ಮನ್ನು ನಾವೇ ಕೊಂದುಹಾಕಿಕೊಳ್ಳಲು ನಮಗೆ ಸ್ವತಂತ್ರವಿಲ್ಲ. ದೇವರೇ ನಮಗೆ ಬಿಡುಗಡೆ ಕೊಡುವವರೆಗೂ ನಾವು ಕಾದಿರಬೇಕು.

---

೧. ಇದು ಪಿಥೋಗರಸ್ ಮತ್ತು ಅವನ ಪಂಥದವರು ಉಪದೇಶ ಮಾಡಿದ ರಹಸ್ಯ. ಪಿಥೋಗರಸ್ಸನು (ಸುಮಾರು ಕ್ರಿ. ಪೂ. ೫೮೦-೫೦೦) ಪ್ರಸಿದ್ಧ ಶಾಸ್ತ್ರವೇತ್ತನು ಜ್ಞಾನಿಯು. ಅಧ್ಯಾತ್ಮ, ಗಣಿತ, ವಿಜ್ಞಾನ ಮುಂತಾದ ಶಾಸ್ತ್ರಗಳಿಗೆ ಆದಿ ಆಚಾರ್ಯನು. ನಮ್ಮಲ್ಲಿ ಅಗಸ್ತ್ಯಮಹರ್ಷಿಯು ವಿಷಯದಲ್ಲಿ ಪ್ರತೀತಿಯು ಇರುವಂತೆ ಈತನೂ ಗ್ರೀಕರಲ್ಲಿ ಗಣಿಸಲ್ಪಟ್ಟನು. ಬಹಳ ದೇಶಗಳಲ್ಲಿ ಸಂಚಾರಮಾಡಿ, ಬಹಳ ಜ್ಞಾನಿಗಳಿಂದ ಕಲಿತು, ಅನಂತರ ಇಟಲಿ ದೇಶದಲ್ಲಿನ ಕ್ರಾಟೋನ ಎಂಬ ಊರಿನಲ್ಲಿ ಒಂದು ಆಶ್ರಮವನ್ನು ಸ್ಥಾಪಿಸಿ ಶಿಷ್ಯಸಮೂಹದೊಂದಿಗೆ ತನ್ನ ವಿಚಾರಗಳನ್ನು, ಆಧ್ಯಾತ್ಮಿಕ ಸಾಧನೆಗಳನ್ನು ಮಾಡುತ್ತಿದ್ದನು. ಈತನ ಅಮಾನುಷ ಮಹಿಮೆ, ಸಿದ್ಧಿಗಳ ವಿಚಾರದಲ್ಲಿ ಅನೇಕ ಕಥೆಗಳಿರುವವು.

ದೇಹದಲ್ಲಿನ ಆತ್ಮವು ನಿತ್ಯವೆಂದೂ, ಮರಣಾನಂತರ ಜನ್ಮ ಉಂಟೆಂದೂ, ಸಂಸ್ಕಾರಕ್ಕನುಸಾರವಾಗಿ ಈ ಜನ್ಮಗಳು ಪ್ರಾಪ್ತವಾಗುವವೆಂದೂ, ಆದರೆ ಆತ್ಮವು

**ಕೆಬೀಸ್:** ‘ ಜ್ಞಾನವನ್ನು ಹೊಂದಿದ ಪ್ರತಿಯೊಬ್ಬನೂ ಮರಣವನ್ನು ಬಹು ಆಶೆಯಿಂದ ಎದುರುನೋಡುವನು’ ಎಂದು ನೀವು ಹೇಳಿದುದು ಇದಕ್ಕೆ ವಿರೋಧವಲ್ಲವೇ? ನಾವು ದೇವರ ಸ್ವತ್ತಾಗಿದ್ದು ದೇವರ ಅಧೀನದಲ್ಲಿರುವುದು ನಿಜವಾಗಿದ್ದರೆ ಜ್ಞಾನಿಯಾದವನು ಹೇಗೆ ಆ ರಕ್ಷಣೆಯಿಂದ ಬಿಡುಗಡೆ ಹೊಂದಲು ಆಶಿಸುವನು? ಏತಕ್ಕೆ ಮರಣವನ್ನು ಆಶೆಯಿಂದಿದಿರು ನೋಡಬೇಕು?

**ಸೋಕ್ರಟೀಸ್:** (ನಗುನಗುತ್ತಾ) ಓಹೋ! ನನ್ನ ಮೇಲೆ ದೋಷವನ್ನು ಮತ್ತೆ ಆರೋಪಿಸಿದಿರಿ. ಏತಕ್ಕೆ ಪ್ರಾಣವನ್ನು ಬಿಡಲಿಚ್ಛಿಸುವಿರಿ? ಪ್ರಾಣವನ್ನುಳಿಸಿಕೊಳ್ಳಲು ಏತಕ್ಕೆ ಪ್ರಯತ್ನಪಡಲಿಲ್ಲ? ಎಂದು ನನ್ನನ್ನು ಕೇಳುವುದಕ್ಕೆ ಬದಲಾಗಿ ಈ ಪ್ರಶ್ನೆಯನ್ನು ಕೇಳಿರುವಿರಲ್ಲವೇ?

---

ಪರಿಶುದ್ಧವೆಂದೂ ದೇಹಧಾರಣೆಯೇ ಬಂಧನವೆಂದೂ, ನಮ್ಮಲ್ಲಿ ಕೇವಲ ಋಷಿಯಲ್ಲಿರುವ ಆಧ್ಯಾತ್ಮಿಕ ತತ್ವಗಳನ್ನೇ ಇವನು ಉಪದೇಶ ಮಾಡಿದನು. ಉತ್ತರ ಗೀತೆಯಲ್ಲಿನ “ ಅತ್ಯಂತ ಮಲಿನೋ ದೇಹೋ ದೇಹೀ ಚಾತ್ಯಂತ ನಿರ್ಮಲಃ ” ಎನ್ನುವ ತತ್ವವನ್ನು ಅಂಗೀಕರಿಸಿ ಆತ್ಮಪರಿಶುದ್ಧತೆಯನ್ನು ಸದಾ ಸಾಧಿಸಬೇಕೆಂದು ಪಿಥೋಗರಸ್ಸನು ಉಪದೇಶಿಸಿದನು. ಇದನ್ನೇ ಸೋಕ್ರಟೀಸನೂ ಅಂಗೀಕರಿಸಿದ್ದನೆಂದು ಕಾಣುತ್ತದೆ. ದೀರ್ಘ ಜಿಜ್ಞಾಸಮಾತ್ರವಲ್ಲದೆ, ಆಗಾಗ್ಗೆ ಸೋಕ್ರಟೀಸನು ಪ್ರಪಂಚವನ್ನು ಮರೆತು ನಿಷ್ಠೆಯಲ್ಲಿ ಕೂಡುತ್ತಿದ್ದನೆಂದು ಅವನ ವಿಚಾರದಲ್ಲಿ ಕಥೆಗಳಿವೆ.

ಪಿಥೋಗರಸ್ಸನು ಈ ತತ್ವಗಳನ್ನು ಭಾರತದೇಶೀಯರಿಂದ ಕಲಿತನೆಂದು ಪರಿಶೋಧಕರು ಒಪ್ಪಿಕೊಂಡಿದ್ದಾರೆ.

ಆ ಕಾಲದಲ್ಲಿ ಬಹು ವ್ಯಾಪಾರಪ್ರಸಿದ್ಧವಾಗಿದ್ದ ಪಾರಸಿ ಚಕ್ರಾಧಿಪತ್ಯದ ದ್ವಾರಾ ಭಾರತದೇಶಕ್ಕೂ ಪಾಶ್ಚಾತ್ಯ ದೇಶಗಳಿಗೂ ಸಂಪರ್ಕವಿತ್ತೆನ್ನುವುದು ಐತಿಹಾಸಿಕ ವಿಷಯ. ಆದರೆ ಭಾರತದೇಶದ ಆಧ್ಯಾತ್ಮಿಕ ತತ್ವಗಳು ಹೇಗೆ, ಎಷ್ಟು ಪ್ರಮಾಣ ವ್ಯಾಪಿಸಿದ್ದವು ಎನ್ನುವುದನ್ನು ಮುಂದಿನ ಪರಿಶೋಧಕರು ಹೇಳಬೇಕಾಗಿದೆ

ಅದಕ್ಕೆ ಅಲ್ಲಿದ್ದವರು 'ಹೌದು' ಎಂದು ಒಪ್ಪಿದರು.

ಸೋಕ್ರಟೀಸ್: ಹಾಗಾದರೆ ಕೇಳಿ. ದೇವರ ರಕ್ಷಣೆಯಲ್ಲಿ ನಾನು ಜೀವಿಸುತ್ತಬಂದೆನು. ಅವನ ಆಜ್ಞೆಯಾದ ಕೂಡಲೇ ಸಂತೋಷವಾಗಿ ಪ್ರಾಣವನ್ನರ್ಪಿಸುವೆನು. ಆದರೆ ಹಾಗೆ ಪ್ರಾಣವನ್ನು ಬಿಟ್ಟಕೂಡಲೇ ಆತ್ಮವು ನಾಶ ಹೊಂದುವುದಾದರೆ ನೀವು ಹೇಳಿದುದು ಸರಿ. ಆತ್ಮವು ನಾಶರಹಿತವಾದುದು. ಈ ದೇಹವು ಹೋದರೂ, ದೇವರ ರಕ್ಷಣೆಯಲ್ಲಿಯೋ ಅವನ ಪಕ್ಕದಲ್ಲಿಯೋ ಅಥವಾ ಬೆರಿಡೆಯಲ್ಲಿಯೋ ಅವನ ಪೂರ್ಣ ಅಧೀನದಲ್ಲಿ ಇರುವೆವೆನ್ನುವುದು ದಿಟ. ಆದುದರಿಂದ ಮರಣವನ್ನು ಕಂಡು ದುಃಖ ಪಡಬೇಕಾಗಿಲ್ಲ.

ಸಿಮ್ಮಿಯಸ್: ಆತ್ಮವು ನಾಶರಹಿತವೆಂದು ನಮಗೆ ಚೆನ್ನಾಗಿ ವಿವರಿಸಬೇಕು. ನೀವು ನಮ್ಮನ್ನು ಬಿಟ್ಟು ಹೋಗುವುದಕ್ಕೆ ಮೊದಲೇ ಇದನ್ನು ಕುರಿತು ನಾವು ಜ್ಞಾನಹೊಂದುವಂತೆ ಉಪದೇಶಮಾಡಿದರೆ ಒಳ್ಳೆಯದು.

ಸೋಕ್ರಟೀಸ್: ಹಾಗೆಯೇ ಆಗಲಿ. ಆದರೆ ಕ್ರಿಟೋ ಏನೋ ಹೇಳಲಿಚ್ಛಿಸುವನಂತೆ ತೋರುವುದು. ಅದೇನು ಕ್ರೀಟೋ?

ಕ್ರಿಟೋ: ಏನೂ ಇಲ್ಲ ಸೋಕ್ರಟೀಸ್! ನಿಮಗೆ ವಿಷಪಾನವನ್ನು ಕೊಡಬೇಕಾದವನು ಹೇಳುತ್ತಾನೆ, ನೀವು ಹೆಚ್ಚಿಗೆ ಮಾತನಾಡಬಾರದು. ಮಾತನಾಡಿದರೆ ದೇಹದಲ್ಲಿ ಉಷ್ಣ ಹೆಚ್ಚಾಗಿ ಆ ವಿಷದವೇಗವನ್ನು ತಡೆಯುವುದು. ಹಾಗೆ ವಿಷದ ವೇಗವು ತಡೆದರೆ ಮರಣವು ಸುಲಭವಾಗಿ ಉಂಟಾಗದೆ ಎರಡು ಮೂರು ಸಲ ವಿಷಪಾನವನ್ನು ಕೊಡಬೇಕಾಗುವುದು ಎಂದು.

ಸೋ: ಅವನ ಮಾತಿರಲಿ. ಎಷ್ಟುಸಲ ಕೊಡಬೇಕೋ ಅಷ್ಟು ಸಲ ಕೊಡಬಹುದೆಂದು ಹೇಳು. ಅದಕ್ಕೇನು ಅಡ್ಡಿ?

ಕ್ರಿ: ನೀವು ಹೀಗೆಯೇ ಉತ್ತರವನ್ನು ಕೊಡುವಿರೆಂದು ನನಗೆ ಗೊತ್ತು. ಆದಕ್ಕೇ ಸುಮ್ಮನಿದ್ದೆನು.

.....................................................

ಸೋ: ಜ್ಞಾನಿಯಾದವನು ಮರಣವನ್ನು ಅಪೇಕ್ಷೆಯಿಂದಿದಿರುನೋಡು ವನೆಂದು ನಿಮ್ಮ ಮನಸ್ಸಿಗೆ ಬಂದಿರುವುದೇ?

ಸಿಮ್ಮಿಯಸ್: (ನಕ್ಕು) ನಮ್ಮನ್ನು ನಗುವಂತೆ ಮಾಡುವಿರಿ. ಇದು ನಗುವಸಮಯವಲ್ಲ. ನೀವು ಹೇಳುವುದನ್ನು ಒಪ್ಪಿಕೊಂಡು ಎಲ್ಲಾ ಜ್ಞಾನಿಗಳನ್ನು ಕರೆಸಿ 'ನೀವೇ ಮರಣವನ್ನು ಇಚ್ಛಿಸುವಿರಂತೆ' ಎಂದು ಎಲ್ಲರಿಗೂ ಒಂದೇ ಸಲ ಮರಣ ದಂಡನೆಯನ್ನು ವಿಧಿಸಿ, ಈ ಜ್ಞಾನಿಗಳ ತೊಂದರೆಯು ತಪ್ಪಿತು ಎಂದುಬಿಟ್ಟಾರು.

ಸೋ: ಹಾಗೆ ಮಹಾಜನರು ಮಾಡಿದರೆ ಉತ್ತಮವೇ. ಆದರೆ ಯಾವ ಕಾರಣಕ್ಕಾಗಿ ಯಾವ ರೀತಿಯಲ್ಲಿ ಮರಣವನ್ನು ಇಚ್ಛಿಸುವನು ಎನ್ನುವುದು ಅವರಿಗೆ ತಿಳಿಯದು. ಮರಣವೆಂದರೇನು? ನಮ್ಮ ಆತ್ಮವೂ ದೇಹವೂ ಅಗಲುವುದೇ ಅಲ್ಲವೇ?

ಸಿ: ಹೌದು.

ಸೋ: ಜ್ಞಾನಿಗಳ ಧ್ಯೇಯವೂ, ಭಾವನೆಯೂ ಎಂತಹುದುದೆಂದು ಸ್ವಲ್ಪ ವಿಚಾರ ಮಾಡುವ. ಒಳ್ಳೆ ಸಿಹಿಯಾದ ಪದಾರ್ಥ ಗಳನ್ನುಂಡು ಅನುಭವಿಸಿ ಅವುಗಳಿಂದುಂಟಾಗುವ ಸುಖ ವನ್ನು ಮತ್ತು ಇತರ ಇಂದ್ರಿಯಗಳ ಮೂಲಕ ಉಂಟಾ ಗುವ ಅಲ್ಪ ಸುಖಗಳನ್ನು ದೊಡ್ಡದೆಂದು ಗಣಿಸಲಾರ ರಲ್ಲವೇ? ಇವುಗಳ ಮೇರೆಯನ್ನು ದಾಟಿ ಪರಸುಖ ಗಳನ್ನು ಇಚ್ಛಿಸುವರಲ್ಲವೇ?

ಸಿ: ಹೌದು.

ಸೋ: ಅಂದರೆ ಜ್ಞಾನಿಯ ಮನಸ್ಸು ದೇಹವನ್ನವಲಂಬಿಸುವುದಿಲ್ಲ. ದೇಹದಿಂದ ಕೂಡಿದವನಾಗಿದ್ದರೂ, ಸಾಧ್ಯವಾದವರೆಗೂ

ದೇಹವನ್ನೂ ತತ್ಸಂಬಂಧವಾದ ಅಲ್ಪಸುಖಗಳನ್ನೂ ಮನಸ್ಸಿನಿಂದ ದೂರಮಾಡಿ ಆತ್ಮವಿಷಯಗಳಲ್ಲಿಯೇ ಅವನು ಮನಸ್ಸನ್ನು ನಿಲ್ಲಿಸುವನಲ್ಲವೇ?

ಸಿ: ಹೌದು.

ಸೋ: ಅಂದರೆ ಪ್ರಾಣ ಇರುವಾಗಲೇ ಜ್ಞಾನಿಯಾದವನು ಈ ದೇಹದ ಬಂಧನಗಳಿಂದ ತನ್ನ ಆತ್ಮವನ್ನು ವಿಮುಕ್ತಪಡಿಸಲು ಯತ್ನಿಸುವನು.

ಸಿ: ಹೌದು.

ಸೋ: ಜ್ಞಾನವನ್ನು ಪಡೆಯಲು ಪ್ರಯತ್ನಿಸುವಾಗ ಒಬ್ಬ ಮನುಷ್ಯನು ಇಂದ್ರಿಯಸುಖಗಳಲ್ಲಿ ಮನಸ್ಸನ್ನಿಟ್ಟರೆ ಅವನ ಪ್ರಯತ್ನಕ್ಕೆ ಅಡಚಣೆಗಳು ಬರುವುವಲ್ಲವೇ? ಅಲ್ಲದೆ ಇಂದ್ರಿಯಗಳ ಮೂಲಕ ಮನುಷ್ಯನಿಗೆ ಉಂಟಾಗಬಹುದಾದ ಜ್ಞಾನವೆಲ್ಲವೂ ಅಜ್ಞಾನದಿಂದ ಮಾಸಿ ಕೆಟ್ಟಿರುವುದೆಂದು ನಾವು ತಿಳಿದಿರುವೆವಲ್ಲವೇ?

ಸಿ: ಹೌದು.

ಸೋ: ಆದುದರಿಂದ ನಿಜವಾದ ಜ್ಞಾನವನ್ನು ಹೊಂದಬೇಕಾದರೆ ವಿಷಯಗಳನ್ನು ತೊರೆದು ಅವುಗಳಿಂದುಂಟಾಗುವ ಅವಸ್ಥೆಗಳಿಂದ ಮನಸ್ಸನ್ನು ಬಿಡುಗಡೆ ಮಾಡಲು ಯತ್ನಿಸಬೇಕು. ಜ್ಞಾನಿಯ ಆತ್ಮವು ತನ್ನನ್ನು ಸೆರೆಯಲ್ಲಿ ಹಿಡಿದಿಟ್ಟಿರುವ ದೇಹವನ್ನು ಬಿಟ್ಟು ದೂರವಾಗಲು ಸದಾಕಾಲವೂ ಆಶಿಸುತ್ತಿರುವುದು.

ದೇಹವಿರುವವರೆಗೂ ಅದರ ಯೋಗಕ್ಷೇಮಕ್ಕಾಗಿ ಪಾಡು ಪಡಬೇಕು. ನಮ್ಮ ಕಾಲವೂ, ಪ್ರಯತ್ನವೂ ಅದಕ್ಕಾಗಿಯೇ ವಿನಿಯೋಗಿಸಲ್ಪಡುತ್ತವೆ. ದುಃಖ ಸಂಭವಿಸಿದಾಗಲೆಲ್ಲಾ ಮನಸ್ಥೈರ್ಯವು ತಪ್ಪಿ ಸತ್ಯದ ಜ್ಞಾನವುಂಟಾ

ಗುಪ್ರವಕ್ಕೆ ಅಡ್ಡಿಯಾಗಿರುವುದು. ದೇಹವಿರುವವರೆಗೂ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಗಳಿಂದ ಜ್ಞಾನವನ್ನು ಹೊಂದುವುದಕ್ಕೆ ಪ್ರತಿಬಂಧಕವಾಗುವುದು. ಎಲ್ಲಾ ಬಗೆಯ ಕೆಟ್ಟ ಕೆಲಸಗಳಿಗೂ, ಸ್ಥಿರವಲ್ಲದ ವಸ್ತುವನ್ನು ಸಂಪಾದಿಸುವುದಕ್ಕೂ, ಹಗೆತನಕ್ಕೂ, ಜಗಳಕ್ಕೂ, ನಮ್ಮ ದೇಹವೂ ಮತ್ತು ಅದನ್ನು ಕಾಪಾಡಬೇಕೆಂಬ ಆಶೆಯೂ ಕಾರಣವಾಗಿದೆ. ಸತ್ಯವಾದ ಜ್ಞಾನವನ್ನು ಹೊಂದಲು ನಾವು ಯತ್ನಿಸಲವಕಾಶವಿಲ್ಲದಂತೆ ಮಾಡುವುದೂ ಅದೇ. ಒಂದು ವೇಳೆ ಒಬ್ಬನು ಮನೋವಿಕಾರವನ್ನಡಗಿಸಿ ಜ್ಞಾನವನ್ನು ಹೊಂದಲು ಅವಶ್ಯಕವಾದ ಸ್ಥಿತಿಯಲ್ಲಿ ಮನಸ್ಸನ್ನು ನಿಲ್ಲಿಸಿದರೂ ಉತ್ತರಕ್ಷಣದಲ್ಲಿಯೇ ದೇಹದ ಕಡೆಯ ಗಮನವೇ ಮತ್ತೆ ಮೇಲೆದ್ದು ನಿಂತು ಆ ಸ್ಥಿತಿಯನ್ನು ಕೆಡಿಸುವುದು. ಆದುದರಿಂದ ಪರಿಪೂರ್ಣವಾದ ಸತ್ಯಜ್ಞಾನವೆಂಬುದೊಂದುಂಟಾದರೆ, ಅದು ಒಬ್ಬನಿಗೆ ಬೇಕಾಗಿದ್ದರೆ,ದೇಹವನ್ನು ಬಿಟ್ಟು ಆತ್ಮವು ದೂರವಾಗಿ ಬೇರೆಯಾಗಿ ನಿಂತರೇನೇ ಅದನ್ನು ಹೊಂದಬಹುದು. ದೇಹದೊಡನೆ ಈ ಲೋಕದಲ್ಲಿರುವವರೆಗೂ ಇಹಲೋಕ ಸೌಖ್ಯಗಳ ಅನುಭವವನ್ನು ತೊರೆದು, ದೇಹ ಸಂಬಂಧವಾದ ಎಲ್ಲಾ ವಿಷಯಗಳನ್ನೂ ದೂರಮಾಡಬೇಕು ಹೀಗೆ ಈಶ್ವರನು ಮರಣವನ್ನು ಕೊಟ್ಟು ನಮಗೆ ಮುಕ್ತಿಯನ್ನು ದಯಪಾಲಿಸುವವರೆಗೂ (ಬಿಡುಗಡೆಯನ್ನು ಕೊಡುವವರೆಗೂ), ನಮ್ಮಿಂದ ಸಾಧ್ಯವಾದಷ್ಟು ಆತ್ಮವನ್ನು ದೇಹಸಂಬಂಧದಿಂದಲೂ ಅದರಿಂದುಂಟಾಗುವ ದೋಷಗಳಿಂದಲೂ ನಿರ್ಲಿಪ್ತವಾಗಿಟ್ಟಿರಬೇಕು. ಯಾವನು ಪ್ರಾಣದಿಂದಿರುವಾಗಲೇ ತನ್ನ ಆತ್ಮವನ್ನು ದೇಹದಿಂದ ಸಾಧ್ಯವಾದಮಟ್ಟಿಗೂ ದೂರವಾಗಿ ಪರಿಶುದ್ಧ ರೀತಿಯಲ್ಲಿಟ್ಟಿರುತ್ತಾನೋ ಅವನು ಮರಣಾನಂತರ ಈಶ್ವರನ

ಸನ್ನಿಧಿಯಲ್ಲಿ ಶುದ್ಧ ಆತ್ಮಗಳ ಸಮೂಹದಲ್ಲಿ ಹೋಗಿ ಸೇರಿ ಪೂರ್ಣ ಸತ್ಯಜ್ಞಾನವನ್ನು ಹೊಂದುವನು.

(ಅನಂತರ ಆತ್ಮಕ್ಕೆ ಏನೂ ನಾಶವಿಲ್ಲವೆನ್ನುವುದನ್ನು ಕುರಿತು, ಜೀವಿಗಳು ತಮ್ಮ ತಮ್ಮ ಕರ್ತವ್ಯಗಳಿಗನುಸಾರವಾಗಿ ಮುಂದಿನ ಜನ್ಮಗಳನ್ನು ಹೊಂದುವುದನ್ನು ಕುರಿತು, ಸುಖದುಃಖ ಎಂಬ ದ್ವಂದ್ವಗಳ ಬಂಧನದಿಂದ ದೂರವಾಗಿ ಆತ್ಮಜ್ಞಾನವನ್ನು ಪಡೆದವನೇ ಮುಕ್ತಿಯನ್ನು ಹೊಂದುವನು ಎಂಬುದನ್ನು ಕುರಿತು ಅನುಮಾನ, ಯುಕ್ತಿ ಸಹಿತವಾಗಿ ದೀರ್ಘಕಾಲ ಜಿಜ್ಞಾಸ ಮಾಡಿ ಬೋಧಿಸಿದನು.)೧

ಸೋ: ಆದುದರಿಂದ ಯಾವನೊಬ್ಬನು ತನ್ನ ಜೀವನಕಾಲದಲ್ಲಿತನ್ನ ಅನಿತ್ಯಸೌಖ್ಯಗಳನ್ನು ತೊರೆದು ಈ ದೇಹಕ್ಕೆ ಸಂಬಂಧಪಟ್ಟ ಸುಖದುಃಖಗಳನ್ನು ತ್ಯಜಿಸಿ ಆತ್ಮಜ್ಞಾನ, ಸಮತ್ವ, ಧರ್ಮ, ಮೋಹರಾಹಿತ್ಯ, ನಿತ್ಯಾನಂದ, ಸತ್ಯ ಇವುಗಳನ್ನು ವೃದ್ಧಿಪಡಿಸುತ್ತಾ ಬರುವನೋ ಅಂತಹವನು ಮರಣವನ್ನು ಕಂಡು ಭಯಪಡಬೇಕಾಗಿಲ್ಲ. ಅವನು ತನ್ನ ಆತ್ಮವು ಸದ್ಗತಿ ಹೊಂದುವುದೆಂದು ಧೈರ್ಯವಾಗಿರುವನು. ದೇಹವನ್ನು ಬಿಟ್ಟುಹೋಗಲು ಈಶ್ವರನು ಎಂದು ಆಜ್ಞೆಯನ್ನು ಮಾಡಿದರೂ ಅದನ್ನು ಅಂಗೀಕರಿಸಲು ಸಿದ್ಧನಾಗಿರುವನು. ನನ್ನ ಮಿತ್ರರಾದ ನೀವೂ ನಿಮ್ಮ ಕಾಲವನ್ನು ಇದಿರುನೋಡುತ್ತಿರಿ. ನನ್ನನ್ನು ಈಗಲೇ ಕಾಲನು ಕರೆ

---

೧. ಇಲ್ಲಿ ಫೈಡೋ ಎನ್ನುವ ಮೂಲಗ್ರಂಥದಲ್ಲಿ ಬಹಳ ಉದ್ದವಾದ ಮತ್ತು ಸ್ವಾರಸ್ಯವಾದ ಜಿಜ್ಞಾಸವಿದೆ. ಇದನ್ನು ಸೇರಿಸಿದ್ದರೆ ಈ ಪುಸ್ತಕವು ಇಮ್ಮಡಿಯಾಗುತ್ತಿತ್ತು. ಸೋಕ್ರಟೀಸನ ಸ್ಥೂಲಪರಿಚಯವೇ ಈ ಪುಸ್ತಕದ ಉದ್ದೇಶವಾದ್ದರಿಂದ ಅದನ್ನು ಇಲ್ಲಿ ಸಂಕ್ಷೇಪ ರೀತಿಯಲ್ಲಿ ಮಾತ್ರ ಸೂಚಿಸಿದೆ.

ಯುವಸು. ಆದುದರಿಂದ ನಾನು ಸ್ನಾನಮಾಡಲು ಹೋಗುವೆನು. ವಿಷಪಾನ ಮಾಡುವುದಕ್ಕೆ ಮೊದಲೇ ಸ್ನಾನ ಮಾಡಿಬಿಡುವುದು ಒಳ್ಳೆಯದು. ಇಲ್ಲವಾದರೆ ಅನಂತರ ಪ್ರೇತವನ್ನು ತೊಳೆಯಬೇಕಾಗುವುದು. ಜನರಿಗೆ ವೃಥಾ ತೊಂದರೆ.

ಹೀಗೆಂದು ಮುಕ್ತಾಯಮಾಡಿದ ಕೂಡಲೇ ಕ್ರಿಟೋ 'ಹಾಗೆಯೇ ಆಗಲಿ' ಎಂದು ಹೇಳಿ 'ನಿಮ್ಮ ಮಿತ್ರರಿಗಾಗಲಿ ನನಗಾಗಲೀ ಮಕ್ಕಳ ವಿಷಯವಾಗಿಯಾಗಲಿ ಬೇರೆವಿಷಯವಾಗಿಯಾಗಲೀ ನೀವೇನಾದರೂ ಹೇಳಬೇಕಾದುದುಂಟೇ? ನಾವು ನಿಮಗೆ ಯಾವ ವಿಧವಾದ ಸಹಾಯವನ್ನಾದರೂ ಮಾಡಲಾದೀತೇ ? ಅಪ್ಪಣೆ ಕೊಡಬೇಕು' ಎಂದು ಕೇಳಿದನು.

ಸೋ: ಕ್ರಿಟೋ? ನಾನು ಇಷ್ಟು ದಿನಗಳಾಗಿ ನಿಮಗೆ ಹೇಳುತ್ತಿರುವಂತೆ ನೀವು ನಡೆದರೆ ಸಾಕು. ನಿಮ್ಮ ಆತ್ಮಗಳನ್ನು ಸಂರಕ್ಷಿಸಿಕೊಂಡು ಅವನ್ನು ಶುದ್ಧಮಾಡುತ್ತ ಬನ್ನಿರಿ. ಅದನ್ನು ಮಾಡಿದರೆ ಮತ್ತೆ ಇತರ ವಿಷಯಗಳೆಲ್ಲವೂ ತಾವಾಗಿಯೇ ಬರುವುವು. ಈಗ ನೀವು ನನ್ನೆದುರಿನಲ್ಲಿ ಯಾವ ವಿಧವಾದ ಪ್ರತಿಜ್ಞೆಯನ್ನು ಮಾಡದಿದ್ದರೂ ನಾನು ಇಷ್ಟು ದಿನಗಳಾಗಿ ಹೇಳಿದ ರೀತಿಯಲ್ಲಿ ನಿಮ್ಮ ಜೀವನವನ್ನು ನಡೆಯಿಸಿಕೊಂಡು ಬಂದರೆ ನನ್ನ ಕುಟುಂಬವನ್ನು ಕುರಿತೂ ನಿಮ್ಮ ಕುಟುಂಬಗಳನ್ನು ಕುರಿತೂ ನಾನು ನಿಮಗೆ ಹೇಳದೇ ಇದ್ದರೂ ನೀವು ಯಾವ ರೀತಿಯಲ್ಲಿ ನಡೆದುಕೊಳ್ಳಬೇಕೋ ಆ ರೀತಿಯಲ್ಲಿಯೇ ನಡೆದುಕೊಳ್ಳುವಿರಿ. ಇಂದು ನಾವು ಸಂಭಾಷಿಸಿದ ವಿಷಯಗಳನ್ನೂ, ಇದಕ್ಕೆ ಮುಂಚೆ ಅನೇಕ ಸಲ ನಾವು ಸಂಭಾಷಿಸಿದ ವಿಷಯಗಳನ್ನೂ ನೀವು ಮರೆತು, ನಾನು ಗುರುತಿಟ್ಟ ಮಾರ್ಗದಲ್ಲಿ ಜೀವನವನ್ನು ನಡೆಸದೆ ತಪ್ಪಿದರೆ ನೀವು ನನ್ನ ಕುಟುಂ

ಬದ ವಿಚಾರವಾಗಿ ನನ್ನಬಳಿ ಈಗ ಎಷ್ಟು ಪ್ರತಿಜ್ಞೆಯನ್ನು ಮಾಡಿದರೂ ಫಲವಿಲ್ಲವಲ್ಲವೇ?

"ನಮ್ಮಿಂದಾದವರಿಗೂ ಮಾಡುವೆವು. ತಮ್ಮನ್ನು ಯಾವ ರೀತಿಯಲ್ಲಿ ಹೂಳಬೇಕು ಎನ್ನುವುದನ್ನು ಕುರಿತು ಏನು ಅಪ್ಪಣೆ ಕೊಡುವಿರಿ?" ಎಂದು ಕ್ರಿಟೋ ಕೇಳಲು ಸೋಕ್ರಟೀಸನು "ತಮ ಗಿಷ್ಟ ಬಂದಂತೆ ಮಾಡಿರಿ. ಅದು ಹೇಗೆ ನನ್ನನ್ನು ಹೂಳಿಡುವಿರಿ? ನಾನು ನಿಮಗೆ ಸಿಕ್ಕುವೆನೇ ನೋಡುವ" ಎಂದು ನಕ್ಕರು. "ಮಿತ್ರರೇ ನಾನೇನನ್ನು ಹೇಳಿದರೂ ಕ್ರಿಟೋ ನಂಬಲಾರನು. ನಿಮ್ಮೊಡನೆ ಇಷ್ಟು ಹೊತ್ತು ಮಾತನಾಡಿ. ಆಕ್ಷೇಪಣೆ ಸಮಾ ಧಾನಗಳನ್ನು ಕ್ರಮವಾಗಿ ಬಿಡಿಸಿ ಹೇಳಿದರೂ ಇಷ್ಟು ಸ್ವಲ್ಪಕಾಲ ದಲ್ಲಿಯೇ ದೇಹದಂದ ಬಿಡುಗಡೆ ಹೊಂದಿ ಓಡಿಹೋಗುವ ಸೋಕ್ರ ಟೀಸನಾದವನು ನಾನೇ ಎಂದು ಅವನು ಒಪ್ಪನು. ಇನ್ನು ಸ್ವಲ್ಪ ಕಾಲದಲ್ಲಿಯೇ ಕಳಚಿ ಕೆಳಗೆ ಬೀಳಲಿರುವ ದೇಹವನ್ನು ನಾನೆಂದು, ನಂಬಿ ನನ್ನನ್ನು ಅವನು ಯಾವ ವಿಧದಲ್ಲಿ ಹೂಳಬೇಕೆನ್ನುವುದನ್ನು ಕೇಳುವನು. ವಿಷವು ವ್ಯಾಪಿಸಿದ ಕೂಡಲೇ ನಿಮ್ಮೊಡನೆ ಇಷ್ಟು ಹೊತ್ತು ಮಾತಾಡುತ್ತಿರುವ ನಾನು ಈ ಸ್ಥಳವನ್ನು ಬಿಟ್ಟು ಪರ ಲೋಕಕ್ಕೆ ಹೋಗುವೆನೆಂದು ಎಷ್ಟು ಹೇಳಿದರೂ ಅವನಿಗೆ ಹೊಳೆಯು ಲಿಲ್ಲ. ನೀವು ಯಾರಾದರೂ ಅವನಿಗೆ ಜಾಮೀನಾಗಿ ನಿಲ್ಲಬಾರದೇ? ನ್ಯಾಯಸ್ಥಳದಲ್ಲಿ ಅವನು ನನಗೆ ಜಾಮೀನಾಗಿ ನಿಂತನು. ಅಂದರೆ ನಾನು ಓಡಿಹೋಗಲಾರೆನು, ಇರುವೆನು ಎಂದು ಮಾತು ಕೊಟ್ಟನು. ಈಗ ನೀವು ಅವನಿಗೆ ನಾನು ಇರಲಾರೆನು, ಹೋಗಿಬಿಡುವೆನು ಎನ್ನುವ ವಿಷಯಕ್ಕೆ ಜಾಮೀನು ಕೊಡಿ" ಎಂದು ಹೇಳಿ ನಕ್ಕರು.

'ಹೀಗೆ ನೀವು ಅವನಿಗೆ ಮಾತನ್ನು ಕೊಟ್ಟರೇನೇ ಅವನು ನನ್ನ ಪ್ರೇತವು ಚಿತೆಯಮೇಲೆ ಮಲಗಿರುವುದನ್ನು ಕಂಡು, ಅಥವಾ ಮಣ್ಣಲ್ಲಿ ಹಾಕಿ ಮುಚ್ಚಲ್ಪಡುವುದನ್ನು ಕಂಡು ಅಳದೇ ಇರುವನು.

'ಸೋಕ್ರಟೀಸನನ್ನು ಚಿತೆಯಮೇಲೆ ಇಡುವೆವು, ಅಥವಾ ಹೂಳುವೆವು' ಎಂದು ಅವನು ಹೇಳದೇ ಇರುವನು.

"ಪ್ರಿಯ ಕ್ರಿಟೋ! ಇಂತಹ ಮಾತೆಲ್ಲ ತಪ್ಪು. ತಪ್ಪಾದ ಮಾತುಗಳನ್ನಾಡುವುದರಿಂದ ಭಾಷೆ ಮಾತ್ರ ಕೆಡುವುದಲ್ಲದೆ ಆತ್ಮಜ್ಞಾನವೂ ಕೆಟ್ಟುಹೋಗಿ ಹಾನಿಯುಂಟಾಗುವುದು. ಧೈರ್ಯವಾಗಿಯೂ, ಸಂತೋಷವಾಗಿಯೂ ಇರಬೇಕು. ಅಳಬೇಡ, ನನ್ನ ದೇಹವನ್ನು ಹೂಳುವೆನೆಂದು ಹೇಳು. ನನ್ನನ್ನು ಹೂಳುವೆನೆಂದು ಹೇಳಬೇಡ. ನಿಮ್ಮ ಇಷ್ಟ ತೋರಿದಂತೆ ಹೇಗೆ ಬೇಕಾದರೂ ನನ್ನ ದೇಹದ ಉತ್ತರಕ್ರಿಯೆಗಳನ್ನು ಮಾಡಿ" ಎಂದು ಹೇಳಿ ಸ್ನಾನಕ್ಕೆ ಹೋದರು. ಕ್ರಿಟೋ ನಮ್ಮನ್ನು ಅಲ್ಲಿ ಬಿಟ್ಟು ಅವರ ಹಿಂದೆಯೇ ಹೋದನು. ನಾವು ಅಲ್ಲಿಯೇ ಕುಳಿತಿದ್ದೆವು. ಅಂದು ಅವರು ಸಂಭಾಷಿಸಿದ ವಿಷಯಗಳನ್ನು ಕುರಿತು ಮಾತಾಡುತ್ತಿದ್ದೆವು. ನಮ್ಮನ್ನು ಹೆತ್ತ ತಂದೆಯನ್ನು ಕಳೆದುಕೊಂಡು ನಾವೆಲ್ಲರೂ ದಿಕ್ಕಿಲ್ಲದ ಮಕ್ಕಳಂತೆ ಆಗಿಹೋಗುವ ರೀತಿಯಲ್ಲಿ ತೋರಿತು. ಸ್ನಾನಮಾಡಿ ಬಂದಮೇಲೆ ಅವರ ಮೂವರು ಮಕ್ಕಳನ್ನೂ ಕರತಂದರು. ಒಬ್ಬನು ವಯಸ್ಸು ಬಂದವನು. ಮತ್ತಿಬ್ಬರೂ ಸಣ್ಣ ಮಕ್ಕಳು. ಅವರಿಗೆ ಬಂಧುಗಳಾದ ಕೆಲವು ಹೆಂಗಸರೂ ಬಂದರು. ಕ್ರಿಟೋವನ್ನಿಟ್ಟುಕೊಂಡು ಅವರಿಗೆ ಹೇಳಬೇಕಾದುದೆಲ್ಲವನ್ನೂ ಹೇಳಿಬಿಟ್ಟರು. ಅವರನ್ನು ಕಳುಹಿಸಿಬಿಟ್ಟು ನಮ್ಮೊಡನೆ ಮತ್ತೆ ಬಂದು ಕುಳಿತರು. ಆ ವೇಳೆಗೆ ಸೂರ್ಯಾಸ್ತಮಾನ ಸಮಯವಾಗಿತ್ತು. ಅನಂತರ ಯಾರೂ ಹೆಚ್ಚಾಗಿ ಮಾತನಾಡಲಿಲ್ಲ.

ಅನಂತರ ಒಬ್ಬ ಉದ್ಯೋಗಸ್ಥನು ಬಂದು ಅವರಮುಂದೆ ನಿಂತು "ಸೋಕ್ರಟೀಸರೇ! ಇತರರಂತೆ ನೀವು ಮಾಡಲಾರಿರೆಂದು ನನಗೆ ಗೊತ್ತು. ನಾನು ವಿಷವನ್ನು ಕೊಟ್ಟು ಕುಡಿ ಎಂದು ಹೇಳಿದರೆ ಅಪರಾಧಿಗಳು ಕೋಪಗೊಂಡು ನನ್ನನ್ನು ಬಯ್ಯುವುದೂ, ಶಾಪವಿಡುವುದೂ, ವಾಡಿಕೆ. ಅಧಿಕಾರಿಗಳ ಆಜ್ಞೆಯನ್ನು ನಾನು ನೆರವೇರಿಸ

ಬೇಕಲ್ಲವೇ? ನಾನೇನುಮಾಡಲಾದೀತು? ನೀವು ಹಾಗೆಲ್ಲ ಮಾಡ ಲಾರಿರೆಂದು ನನಗೆ ಗೊತ್ತು. ಇದುವರೆಗೂ ಇಲ್ಲಿ ಬಂದವರೆಲ್ಲ ರಿಗಿಂತಲೂ ನೀವು ಮಹನೀಯರು ಪ್ರೇಮಪರಿಪೂರ್ಣರು. ನನ್ನ ಮೇಲೆ ನೀವು ಕೋಪಗೊಳ್ಳಲಾರರಿ. ನನಗೆ ಆಜ್ಞೆಮಾಡಿದವರೇ ಈ ಮಹಾದೋಷಕ್ಕೆ ಹೊಣೆಗಾರರು. ನನ್ನನ್ನು ಆಶೀರ್ವದಿಸ ಬೇಕು ಸ್ವಾಮಿ; ನಾನು ಬಂದ ಕೆಲಸ ನಿಮಗೆ ಗೊತ್ತು.'' ಎಂದು ಕಣ್ಣೀರು ಸುರಿಸುತ್ತ ಅಳುತ್ತ ಹೊರಗೆ ಹೊರಟುಹೋದನು.

ಸೋಕ್ರಟೀಸರು ''ಅಪ್ಪಾ ನೀನು ಹೇಳಿದಂತೆ ನಾನು ಮಾಡು ವೆನು. ನಿನಗೆ ಮಂಗಳವಾಗಲಿ'' ಎಂದು ಅವನಿಗೆ ಹೇಳಿ ನಮ್ಮ ಕಡೆಗೆ ತಿರುಗಿ ''ಇವನು ಎಷ್ಟು ಮರ್ಯಾದೆಯನ್ನೂ ಪ್ರೀತಿ ಯನ್ನೂ ತೋರಿಸುತ್ತಿರುವನು! ನಾನು ಇಲ್ಲಿದ್ದಷ್ಟುಕಾಲ ಇವನು ಆಗಾಗ್ಗೆ ನನ್ನೆಡೆಗೆ ಬಂದು ಮಾತನಾಡಿ ಹೋಗುತ್ತಿದ್ದನು ಬಹು ಒಳ್ಳೆಯ ಹೃದಯವುಳ್ಳವನು. ನನಗಾಗಿ ಕಣ್ಣೀರು ಸುರಿಸುವನು ನೋಡಿ. ಕ್ರಿಟೋ, ಬಾ. ಅವನು ಹೇಳಿದಂತೆ ಮಾಡುವ. ವಿಷವು ಸಿದ್ಧವಾಗಿದ್ದರೆ ಅದನ್ನು ತೆಗೆದುಕೊಂಡು ಬರುವಂತೆ ಹೇಳು. ಅಥವಾ ಬೇಗ ಸಿದ್ಧಮಾಡಬೇಕೆಂದು ಹೇಳು'' ಎಂದರು. ಅದಕ್ಕೆ ಕ್ರಿಟೋ ''ಇಲ್ಲ ಸೋಕ್ರಟೀಸ್! ಅವಸರ ಪಡಬೇಡಿ. ಇನ್ನೂ ಸಂಜೆ ಯಾಗಲಿಲ್ಲ. ಬೆಟ್ಟದಮೇಲೆ ಸೂರ್ಯನಿನ್ನೂ ಪ್ರಕಾಶಿಸುತ್ತಿರು ವನು. ಇತರರೆಲ್ಲರೂ ಕೊನೆಯ ದಿನ ಚೆನ್ನಾಗಿ ಊಟಮಾಡಿ, ಮಧುಪಾನಮಾಡಿ, ಮಿತ್ರರೊಡನೆ ಮಾತಾಡಿ ಆನಂದಿಸಿ ಅನಂತರ ಬಹಳಹೊತ್ತು ತಡಮಾಡಿ ವಿಷಪಾನವನ್ನು ಮಾಡುವರು ನೀವೇ ತಕ್ಕೆ ಅವಸರ ಪಡುವಿರಿ? ಇನ್ನೂ ಬಹಳ ಹೊತ್ತು ಇದೆ.'' ಎಂದು ಹೇಳಿದನು.

''ನೀವು ಹೇಳುವ ಮನುಷ್ಯರು ಹಾಗೆ ಮಾಡುವುದು ಸರಿಯೋ. ಏಕೆಂದರೆ ಅವರು ಆ ಸುಖಗಳನ್ನು ದೊಡ್ಡವೆಂದೆಣಿಸಿ ಪ್ರಾಣಮೊಡನೆ ಇರಲು ಎಂದೂ ಆಶೆ ಪಡುವುದರಿಂದ ನಿಧಾನಮಾಡಿ ವಿಷವನ್ನು

ಕುಡಿಯುವರು. ನಾನು ಹಾಗೆ ಮಾಡುವುದು ಯುಕ್ತವೇ? ಹಾಗೆ ಮಾಡಿದರೆ ಪ್ರಾಣವನ್ನುಬಿಡಲು ಮನಸ್ಸಿಲ್ಲದೆ ಈ ದೇಹದೊಡನೆ ಒಂದೆರಡು ನಿಮಿಷವಾದರು ಇನ್ನೂ ಇರಲು ಆಶೆ ಪಡುವನೆಂದು ಅಲ್ಲವೇ ಇತರರೆಣಿಸುವರು? ಅದನ್ನು ಭಾವಿಸಲು ನನಗೆ ನಾಚಿಕೆ ಯಾಗುತ್ತದೆ. ನಾನು ಹೇಳುವುದನ್ನು ಮರೆಯಬೇಡಿರಿ.'' ಎಂದು ಸೋಕ್ರಟೀಸರು ಮತ್ತೆ ಹೇಳಲು ಕ್ರಿಟೋ ಪಕ್ಕದಲ್ಲಿದ್ದ ತನ್ನ ಒಬ್ಬ ಆಳನ್ನು ನೋಡಿ ಸನ್ನೆ ಮಾಡಿದನು. ಅವನು ಹೊರಗೆ ಹೋದನು. ದೀರ್ಘಕಾಲವಾದನಂತರ ವಿಷಪಾನವನ್ನು ತೆಗೆದುಕೊಂಡು ಉದ್ಯೋಗಸ್ಥನೊಬ್ಬನು ಬಂದನು.

ಸೋಕ್ರಟೀಸರು ಅವನನ್ನು ಕಂಡಕೂಡಲೇ ''ಮಿತ್ರನೇ ಈ ವಿಷಯದಲ್ಲೆಲ್ಲಾ ನಿನಗೆ ಚೆನ್ನಾಗಿ ಅನುಭವವುಂಟು. ನಾನು ಮಾಡಬೇಕಾದುದನ್ನು ದಯವಿಟ್ಟು ಹೇಳು'' ಅಂದರು.

''ಇದನ್ನು ನೀವು ಕುಡಿಯಬೇಕು ಅಷ್ಟೇ. ಅನಂತರ ಜೋವು ಹಿಡಿಯುವವರಿಗೂ ತಿರುಗಾಡುತ್ತಿರಬೇಕು. ಅನಂತರ ನೀವು ಮಲಗಬೇಕು. ವಿಷವು ತಾನಾಗಿಯೇ ವ್ಯಾಪಿಸುವುದು.'' ಎಂದು ಹೇಳಿ ಸೋಕ್ರಟೀಸರಿಗೆ ವಿಷವನ್ನು ಕೊಟ್ಟನು. ಅದನ್ನು ಅವರು ಕೈ ನಡುಗಿಸದೆ ಮುಖ ವಿಕಾರಮಾಡದೆ ತೆಗೆದುಕೊಂಡು ಅಧಿಕಾರಿಯನ್ನು ದೃಷ್ಟಿಸಿನೋಡಿ (ಹಾಗೆ ಅವರು ದುರುಗುಟ್ಟಿ ನೋಡುವುದು ವಾಡಿಕೆ) ''ಅಪ್ಪಾ ಈ ಪಾನವು ಇಷ್ಟೇ ಸರಿಯೋ ಅಥವಾ ಇದರಿಂದ ದೇವರಿಗೆ ನೈವೇದ್ಯನಾಗಿ ಅಷ್ಟು ಸಮರ್ಪಿಸಬಹುದೋ?'' ಎಂದು ಕೇಳಿದರು. ಅದಕ್ಕೆ ಅಧಿಕಾರಿಯು ''ಎಷ್ಟು ಬೇಕಾಗುತ್ತದೆಯೋ ಅಷ್ಟೇ ನಾವು ಮಾಡುವುದು ವಾಡಿಕೆ'' ಎಂದು ಹೇಳಿದನು.

''ಹಾಗೆಯೇ? ಒಳ್ಳೆಯದು. ದೇವತೆಗಳನ್ನು ಕುರಿತು ಸ್ತುತಿ ಮಾಡಿ ನನ್ನನ್ನು ಸುಖವಾಗಿ ಕರೆದುಕೊಂಡು ಹೋಗುವಂತೆ

ಪ್ರಾರ್ಥನೆ ಮಾಡಬಹುದಲ್ಲವೇ? ಅದೇಮಾಡಬೇಕಾದ ಕರ್ತವ್ಯ.'' ಎಂದು ಹೇಳಿ ನಸುನಗುತ್ತಾ ವಿಷವನ್ನು ಕುಡಿದುಬಿಟ್ಟರು ಅದು ವರೆಗೂ ನಾವು ಬಹಳಮಟ್ಟಿಗೆ ದುಃಖವನ್ನು ಒಂದು ರೀತಿ ಅಡ ಗಿಸಿದ್ದೆವು. ಆದರೆ ಅವರು ವಿಷವನ್ನು ತೆಗೆದುಕೊಂಡು ಕುಡಿದು ದನ್ನು ಕಂಡಕೂಡಲೇ ನಮ್ಮಿಂದ ಸಹಿಸಲಿಕ್ಕಾಗದೇ ಹೋಯಿತು. ನನ್ನ ಸ್ವಾಧೀನ ತಪ್ಪಿ ಕಣ್ಣೀರು ಹರಿಯಲಾರಂಭಿಸಿತು. ನಾನು ಮುಖವನ್ನು ಮುಚ್ಚಿಕೊಂಡು ಅತ್ತೆನು. ಅವರಿಗೆ ಕಷ್ಟಬಂದಿತೆಂದು ನಾನು ದುಃಖಪಡಲಿಲ್ಲ. ಇಂತಹ ಮಿತ್ರರನ್ನು ಬಿಟ್ಟು ಅಗಲ ಬೇಕಾಯಿತಲ್ಲಾ ಎಂದು ನನ್ನ ದೌರ್ಭಾಗ್ಯಕ್ಕಾಗಿ ನಾನು ಅತ್ತೆನು. ನನಗೆ ಮುಂಚೆಯೇ ಕ್ರಿಟೋ ದುಃಖವನ್ನು ಸಹಿಸಲಾರದೆ ಅಳುತ್ತಾ ಹೊರಗೆ ಹೊರಟುಹೋದನು. ಅಪೂಲ್ಲೋಡೋರಸ್ಸನು ಮೊದಲಿ ನಿಂದಲೂ ಕಣ್ಣೀರು ಸುರಿಸುತ್ತಲೇ ಇದ್ದನು. ಕೊನೆಯಲ್ಲಿ ಗಟ್ಟಿ ಯಾಗಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಅನಂತರ ಸೋಕ್ರ ಟೀಸರೊಬ್ಬರನ್ನು ಬಿಟ್ಟು ಮಿಕ್ಕವರೆಲ್ಲರೂ ದುಃಖವನ್ನು ಸಹಿಸ ಲಾರದೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದೆವು.

'' ಮಿತ್ರರೇ ನೀವು ಮಾಡುವುದೇನು? ಹೆಂಗಸರನ್ನು ನಾನು ಕಳುಹಿಸಿದ್ದಕ್ಕೆ ಕಾರಣವು ಈರೀತಿ ನನ್ನ ಬಳಿಯಲ್ಲಿ ಯಾರೂ ಅಳಬಾರದೆಂದಲ್ಲವೇ? ನೀವು ಈ ರೀತಿಯಾಗಿ ಸಹಿಸಿಕೊಳ್ಳುವುದ ಕ್ಕಾಗದೆ ಅಳುವುದು ಯುಕ್ತವಲ್ಲ. ಆತ್ಮವು ದೇಹವನ್ನು ಬಿಟ್ಟು ಹೋಗುವ ಕಾಲದಲ್ಲಿ ನಿಶ್ಶಬ್ದವಾಗಿರಬೇಕೆಂದು ಹೇಳುವರು. ದಯ ವಿಟ್ಟು ಶಾಂತಚಿತ್ತರಾಗಿರಿ.'' ಎಂದು ಸೋಕ್ರಟೀಸರು ಹೇಳಲು ನಾವು ನಾಚಿಕೆಗೊಂಡು ಅಳುವುದನ್ನು ನಿಲ್ಲಿಸಿದೆವು. ಅವರು ಸ್ವಲ್ಪ ಹೊತ್ತು ತಿರುಗಾಡಿಕೊಂಡಿದ್ದು ಕಾಲು ಜೋವುಹಿಡಿದಂತೆ ತಿಳಿದ ಮೇಲೆ ಅಧಿಕಾರಿಯು ಹೇಳಿದಂತೆ ಅಂಗತ್ತನಾಗಿ ಮಲಗಿದರು. ವಿಷ ಕೊಟ್ಟ ಅಧಿಕಾರಿಯು ಅವರ ಪಾದಗಳನ್ನು ಸವರಿನೋಡಿ ಅನಂತರ ಅವರ ಕಾಲನ್ನು ಚೆನ್ನಾಗಿ ಒತ್ತಿ 'ಹೀಗೆ ಒತ್ತುವುದು

ನಿಮಗೆ ಗೊತ್ತಾಗುತ್ತದೆಯೋ ?' ಎಂದು ಕೇಳಿದನು. ಅದಕ್ಕೆ ಸೋಕ್ರಟೀಸರು ಗೊತ್ತಾಗುವುದಿಲ್ಲವೆಂದರು. ಹೀಗೆ ಕ್ರಮೇಣ ದೇಹವು ಮರಗಟ್ಟಲು ಪ್ರಾರಂಭಿಸಿತು. 'ಎದೆಯವರೆಗೂ ಹೀಗಾದ ಮೇಲೆ ನಾನು ಹೋಗುವೆನು' ಎಂದು ತಾವೇ ಮುಟ್ಟಿನೋಡಿ ಕೊಂಡು ಹೇಳಿದರು. ಸೊಂಟದವರೆಗೂ ತಣ್ಣಗಾದ ಮೇಲೆ ತಮ್ಮ ಮುಖದಮೇಲಿನ ಬಟ್ಟೆಯನ್ನು ತೆಗೆದು 'ಕ್ರಿಟೋ ಅಸ್ಕೇಪಿಯಸ್ ಗುಡಿಯಲ್ಲಿ ಒಂದು ಬಲಿಯನ್ನು ನನಗಾಗಿ ಸಮರ್ಪಿಸಬೇಕು ಆ ಹರಕೆ ಒಂದುಳಿದಿರುವುದು. ಅದನ್ನು ಮರೆಯಬೇಡಿರಿ೧' ಎಂದು ಹೇಳಿದರು. "ಹಾಗೆಯೇ ಆಗಲಿ" ಎಂದು ಕ್ರಿಟೋ ಹೇಳಿ "ಇನ್ನೇನಾದರೂ ನಿಮ್ಮ ಮನೋಭೀಷ್ಟ ಉಂಟೇ ?" ಎಂದು ಕೇಳಿದನು. ಅದಕ್ಕೆ ಏನು ಉತ್ತರವೂ ಬರಲಿಲ್ಲ. ಸ್ವಲ್ಪ ಕಾಲದಲ್ಲಿ ದೇಹವು ಸ್ತಬ್ಧವಾಯಿತು. ಅಧಿಕಾರಿಯು ಬಟ್ಟೆಯನ್ನು ತೆಗೆದು ನೋಡಿದ್ದರಲ್ಲಿ ಪ್ರಾಣ ಹೋಗಿತ್ತು; ಪ್ರೇತ ಬಿದ್ದಿತ್ತು. ಕ್ರಿಟೋ ಬಾಯಿಯನ್ನೂ ಕಣ್ಣನ್ನೂ ಮುಚ್ಚಿದನು.

ಇದೇ ಮುಕ್ತಾಯ. ನಾವು ಕಂಡ ಮನುಷ್ಯರಲ್ಲಿ ಉತ್ತಮವಾದ ಜ್ಞಾನವನ್ನೂ ಧರ್ಮವನ್ನೂ ಸತ್ಪ್ರವರ್ತನೆಯನ್ನೂ ಹೊಂದಿದ ನಮ್ಮ ಮಿತ್ರರು ಪರಲೋಕವನ್ನೈದಿದ ವೃತ್ತಾಂತವಿದೇ ಎಂದು ಫೈಡೋ ಹೇಳಿ ಮುಗಿಸಿದನು.

---

೧. ನಮ್ಮ ಧನ್ವಂತರಿಯಂತೆ ಗ್ರೀಕರಲ್ಲಿ ಅಸ್ಕ್ಲೇಪಿಯಸ್ ವೈದ್ಯಶಾಸ್ತ್ರಕ್ಕೆ ಅಧಿದೇವತೆಯು. ಕಾಯಿಲೆಗಳಿಂದ ವಾಸಿಯಾದವರು ಈ ದೇವತೆಗೆ ಕಾಣಿಕೆ ಒಪ್ಪಿಸುವುದು, ಬಲಿ ಕೊಡುವುದು ವಾಡಿಕೆಯಾಗಿತ್ತು. ಸೋಕ್ರಟೀಸನೇ ನಿಜವಾಗಿಯೂ ಒಂದು ಹರಕೆಯನ್ನು ಸಲ್ಲಿಸಬೇಕಾಗಿತ್ತೊ, ಅಥವಾ ಜನ್ಮವೆಂಬ ವ್ಯಾಧಿಯಿಂದಲೇ ನಿವೃತ್ತವಾಗುವ ಸಮಯದಲ್ಲಿ ಈರೀತಿ ಬಯಸಿದನೋ ನಿರ್ಧರಿಸುವುದಕ್ಕಾಗುವುದಿಲ್ಲ. ಅಂತು ಪ್ರಾಣ ಹೋಗುವವರೆಗೂ, ಶಾಂತಚಿತ್ತನಾಗಿದ್ದು, ಒಬ್ಬರ ಹಂಗೂ ಇರಬಾರದೆಂದು ದೇಹವನ್ನು ಬಿಟ್ಟ ಇವನ ದಾರ್ಢ್ಯವನ್ನು ನಾವಿಲ್ಲಿ ಗಮನಿಸತಕ್ಕದ್ದು.